ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ-೧೪೨

# ಕನ್ನಡದ ಬಾವುಟ




ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ
ಚಾಮರಾಜಪೇಟೆ : : ಬೆಂಗಳೂರು-೧೮

KANNADA BAVUTA : A collection of representative Poe[ms of] the period from 5th Century to 20th Century. Kannada Sah[itya] Parishat, Chamarajpet, Bangalore. 1979. Pages : 190. Price : Rs. 4-00

ಮೊದಲನೆಯ ಮುದ್ರಣ : ೧೯೩೮
ಎರಡನೆಯ ಮುದ್ರಣ : ೧೯೪೦
ಮೂರನೆಯ ಮುದ್ರಣ : ೧೯೪೮
ನಾಲ್ಕನೆಯ ಮುದ್ರಣ : ೧೯೫೪
ಐದನೆಯ ಮುದ್ರಣ : ೧೯೫೮
ಆರನೆಯ ಮುದ್ರಣ : ೧೯೬೮
ಏಳನೆಯ ಮುದ್ರಣ : ೧೯೭೨
ಎಂಟನೆಯ ಮುದ್ರಣ : ೧೯೭೯



ನಾಲ್ಕು ರೂಪಾಯಿಗಳು

ಮುದ್ರಕರು :
ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ
ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ,
ಬೆಂಗಳೂರು - ೧೮

# ಮೊದಲನೆಯ ಮುದ್ರಣದ ಮುನ್ನುಡಿ

ಕನ್ನಡ ನಾಡು ಎಚ್ಚತ್ತು ಕೂಡಿಕೊಳ್ಳುತ್ತಿರುವ ದೊಡ್ಡ ಸಡಗರದಲ್ಲಿ ಕನ್ನಡ ನಾಡಿನ ಹೆಮ್ಮೆಯನ್ನು ಹಾಡಿರುವ ಕವಿಗಳಿಂದ ಆಯ್ದು ತಿರುಳೊಂದನ್ನು ಹಂಚ ಬೇಕೆಂಬ ಬಯಕೆ ಬಹು ಕಾಲದಿಂದ ಕಡೆದು ಕುದಿಯುತ್ತಿತ್ತು. ಕನ್ನಡತಾಯ ಪಾದದಲ್ಲಿ ಹಿಂದಿನ ಹಿರಿಯ ಕವಿಗಳೂ ಈಗಿನ ಕವಿಗಳೂ ಒಪ್ಪಿಸಿದ ಹೂಗಳನ್ನು ಬಾಚಿ ತೆಗೆದು, ಮೂವತ್ತು ವರ್ಷಗಳಿಂದ ನನ್ನ ಎದೆಯಲ್ಲಿ ತುಂಬಿ ಚಿಮ್ಮುತ್ತಿದ್ದುವು ಗಳನ್ನು ಇಲ್ಲಿ ದಂಡೆಗಟ್ಟಿದ್ದೇನೆ. (ನನ್ನವೂ ಕೆಲವು ಹೂವನ್ನು ನನ್ನೊಡನೆ ಈ ಆಸೆಯನ್ನು ಕಾರ್ಯರೂಪಕ್ಕೆ ತಂದ ನನ್ನ ಕೆಳೆಯರು ಇದರಲ್ಲಿ ಸೇರಿಸಿದ್ದಾರೆ. ಅದು ಅವರ ಪ್ರೀತಿ.) ತಾಯಡಿಯ ಹೂವುಗಳಿವು: ನಾನು ನಾರು: ಕನ್ನಡದ ಸತ್ವವೂ, ತಿರುಳೂ ಪೋಣಿಕೆಯ ಕಣ್ಣು. ಕನ್ನಡಿಗರ, ಅದರಲ್ಲೂ ಮಕ್ಕಳ, ಹೆಣ್ಣು ಮಕ್ಕಳ, ಒಕ್ಕಲು ಮಕ್ಕಳ ಮೆಚ್ಚುಗೆಯೇ ನಾನು ಎದಿರುನೋಡುವ ದೊಡ್ಡ ಫಲ. ಅವರಲ್ಲೆಲ್ಲಾ ಕನ್ನಡದ ಹೆಮ್ಮೆ ಹರಡಲಿ. ಅವರಿಂದ ಕನ್ನಡ ಬೆಳಗಲಿ.

೭ನೆಯ ಶತಮಾನದಿಂದ ೨೦ನೆಯ ಶತಮಾನದ ಇಂದಿನವರೆಗಿನ ಕನ್ನಡ ಬೆಳೆಯನ್ನು (೧) ಶಾಸನಗಳು, (೨) ಪೂರ್ವಸಾಹಿತ್ಯ, (೩) ನಾಡಪದಗಳು, (೪) ಇಂದಿನ ಹೊಸ ಕವಿತೆ-ಈ ನಾಲ್ಕು ತೆನೆಗಳಲ್ಲಿ ತೋರಿಸಿದ್ದೇನೆ. ಕಾಲ ಕಾಲದ ಭಾಷೆಯ ಮಾರ್ಪಾಟುಗಳು, ಛಂದಸ್ಸಿನ ಬಗೆಬಗೆಯ ಕುಣಿತ, ಕನ್ನಡ ನಾಡಿನ ಸೊಬಗು, ಹೃದಯ, ಧರ್ಮಗಳು, ಮಹಾವ್ಯಕ್ತಿಗಳು, ಜೀವಗುರಿಗಳು, ಬೇರೆ ಬೇರೆ ಪ್ರಾಂತಪ್ರೇಮಗಳು-ಒಂದು ಮಾತಿನಲ್ಲಿ, ಹಿಂದಿನ ಮಹತ್ವದ ಸಂಸ್ಕಾರ ಮತ್ತು ಸಂಸ್ಕೃತಿ, ಇಂದಿನ ಮಹತ್ವದ ಧ್ಯೇಯ ಮತ್ತು ಯೋಜನೆಗಳು, ನಾಡ ನಾಡಿಯ ಮಿಡಿತ-ನನಗೆ ತಿಳಿದಂತೆ ಯಾವ ಯಾವುದು ಕನ್ನಡ ಬಾವುಟದಡಿಯಲ್ಲಿ ಹೊಮ್ಮಿದ ಎರಡು ಸಾವಿರ ವರ್ಷದ ಜೀವಾಳವೋ ಅದನ್ನೇ ತೆನೆಗಳಾಗಿ ಆಯ್ದು ತೆಕ್ಕೆಮಾಡಿ ಕನ್ನಡಿಗರ ಕೈಗೆ ಒಪ್ಪಿಸಿದ್ದೇನೆ. ಇದರಲ್ಲಿ ಹೆಸರು ಹೇಳಬಹುದಾದ ಪ್ರತಿಯೊಬ್ಬ ಕನ್ನಡ ಕವಿಯೂ ಬಂದಿರುವನೆಂದಾಗಲಿ, ಬಂದಿರುವ ಕವಿಯ, ಇಲ್ಲ, ಕಾವ್ಯದ ಉತ್ತಮ ಭಾಗವನ್ನೇ ಎಲ್ಲ ಕಡೆಯೂ ಆಯ್ದಿದೆಯೆಂದಾಗಲಿ, ಹೇಳುವುದ

ಕ್ಕಿಲ್ಲ. ಈ ವರ್ಷದ ಪರಿಷತ್ತಿನ ವಸಂತೋತ್ಸವದ ಹೊತ್ತಿಗೆ ಸಿದ್ಧಪಡಿಸುವ ಆತುರದಿಂದಲೂ, ಕಡಮೆ ತಿಳಿವಳಿಕೆಯ ದೋಷದಿಂದಲೂ ಬಗೆಬಗೆಯ ಕುಂದುಕೊರತೆಗಳುಂಟೆಂಬುದನ್ನು ಬಲ್ಲೆ. ಅದನ್ನು ತಿದ್ದಿ ದಾರಿತೋರಬೇಕೆಂದು ಕನ್ನಡ ಪ್ರೇಮಿಗಳಲ್ಲಿ ಬಿನ್ನೈಸಿಕೊಳ್ಳುತ್ತೇನೆ.

ಈ ಸಂಗ್ರಹಕಾರ್ಯದಲ್ಲಿ ನೆರವಾದ ನನ್ನ ಶಿಷ್ಯರು ಶ್ರೀ|| ವಿ. ಸೀತಾರಾಮಯ್ಯನವರನ್ನೂ ಶ್ರೀ|| ಕೆ. ವಿ. ರಾಘವಾಚಾರ್ಯರನ್ನೂ ಎಂದೆಂದೂ ಸಂತೋಷದಿಂದ ನೆನೆಯುತ್ತೇನೆ. ಅವರಿಲ್ಲದೆ ಇದು ನನ್ನ ಮನಸ್ಸಿನಲ್ಲಿಯೇ ಉಳಿಯುತ್ತಿತ್ತು. ತಮ್ಮ ಕವಿತೆಗಳನ್ನು ಸೇರಿಸಿಕೊಳ್ಳುವುದಕ್ಕೆ ಒಪ್ಪಿಗೆ ಕೊಟ್ಟ ಕವಿಗಳಿಗೂ, ಚೆಲುವಾದ ಮುಖಚಿತ್ರವನ್ನು ಬರೆದುಕೊಟ್ಟ ಶ್ರೀ|| ಎಂ. ವಿ. ಸೀತಾರಾಮಯ್ಯನವರಿಗೂ, ಶ್ರೀಮನ್ ಮಹಾರಾಜರವರ ಮತ್ತು ಕನ್ನಡ ನಾಡಿನ ಚಿತ್ರದ ಪಡಿಯಚ್ಚುಗಳನ್ನು ಕೊಟ್ಟ ಮೈಸೂರು ವಿದ್ಯಾಶಾಖೆಯ ಅಧಿಕಾರಿಗಳಾದ ಶ್ರೀ|| ಇ. ಜಿ. ಮೆಕಲ್ಪೈನ್ ಅವರಿಗೂ, ಬೇಲೂರು ಶಿಲಾಬಾಲಿಕೆಯ ಚಿತ್ರದ ಪಡಿಯಚ್ಚನ್ನು ಕೊಟ್ಟ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದವರಿಗೂ, ರನ್ನನ ಹೆಸರಿನ ಪಡಿಯಚ್ಚನ್ನು ಕೊಟ್ಟ ಶ್ರೀ|| ಜಿ. ಪಿ. ರಾಜರತ್ನಂ ಅವರಿಗೂ, ಮೈಸೂರು ಶಾಸನಗಳ ಸಂಕಲನದಿಂದ ಗಂಗರಾಜ ನೀತಿಮಾರ್ಗನ ಶಾಸನದ ಚಿತ್ರವನ್ನು ಉಪಯೋಗಿಸಿಕೊಳ್ಳಲು ಅನುಮತಿಕೊಟ್ಟ ಡಾಕ್ಟರ್ ಎಂ. ಹೆಚ್. ಕೃಷ್ಣ ಅವರಿಗೂ, ನಾನು ಕೊಟ್ಟ ತೊಂದರೆಗಳನ್ನೆಲ್ಲಾ ತಾಳಿಕೊಂಡು ಒಂದು ವಾರದಲ್ಲಿ ಅಂದವಾಗಿ ಅಚ್ಚುಮಾಡಿಕೊಟ್ಟ ಬೆಂಗಳೂರು ಪ್ರೆಸ್ಸಿನವರಿಗೂ, ಇನ್ನೂ ಹಲವು ಬಗೆಯಲ್ಲಿ ನನಗೆ ನೆರವಾದ ನನ್ನ ಇತರ ಮಿತ್ರರಿಗೂ ನನ್ನ ಉತ್ತಮ ವಂದನೆಗಳನ್ನು ಸಮರ್ಪಿಸುತ್ತೇನೆ.

**ಕನ್ನಡದ ಬಾವುಟ** ಎಂಬ ಕವಿತೆಯ ಅಚ್ಚಿನ ವಿಷಯದಲ್ಲಿ ಒಂದು ಮಾತು. ಕನ್ನಡ ಬರವಣಿಗೆಯಲ್ಲಿ ಈಗಿರುವ ಅಕ್ಷರ ಸಂಯೋಜನೆಯ ಕ್ರಮ ಹಲವು ದೃಷ್ಟಿಗಳಿಂದ, ಅದರಲ್ಲಿಯೂ ಮುದ್ರಣ ದೃಷ್ಟಿಯಿಂದ ಬಲು ತೊಡಕಾದದ್ದೆಂದೂ, ಯಾವ ರೀತಿಯಲ್ಲಾದರೂ ಕೊಂಚಮಟ್ಟಿಗಾದರೂ ತೊಡಕು ಬಿಡಿಸಿ ಸರಳ ಮಾಡಬೇಕೆಂದೂ ಹಲವರು ಅಭಿಪ್ರಾಯಪಟ್ಟು ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಒಂದು ಸಮಿತಿಯನ್ನು ಏರ್ಪಡಿಸಿ ಆಗಬೇಕಾದ ಮಾರ್ಪಾಟುಗಳ ಪರ್ಯಾಲೋಚನೆಯನ್ನು

ಆ ಸಮಿತಿಗೆ ವಹಿಸಿದರು. ಆ ಸಮಿತಿ ಚರ್ಚೆಗಳನ್ನು ನಡಸಿ ಕೆಲವು ತೀರ್ಮಾನಗಳಿಗೆ ಬಂತು. ಅದು ಸೂಚಿಸಿದ ಕೆಲವು ಮಾರ್ಪಾಟುಗಳನ್ನು ಇಲ್ಲಿ ಬಳಕೆಗೆ ತಂದಿದೆ. ಮುಖ್ಯವಾಗಿ ಮಾಡಿರುವ ಮಾರ್ಪಟುಗಳು ಮೂರು: (i) ದೀರ್ಘ ಚಿಹ್ನೆಯನ್ನು ಎಲ್ಲ ಕಡೆಯೂ ಒಂದೇ ರೀತಿ ಬರೆಯುವುದು–ಆ=ಅೀ, ಬಾ=ಬೀ, ಕೂ=ಕುೀ: (ii) ಒತ್ತಕ್ಷರಗಳನ್ನು ಬಿಡಿಸಿ ಪಕ್ಕದಲ್ಲಿ ಬರೆಯುವುದು–ಕನ್ನಡ=ಕನ್‌ನಡ, ಶ್ರೀ=ಶ್ರೀ (ii) ಎಲ್ಲಾ ಮಹಾಪ್ರಾಣ ಚಿಹ್ನೆಗಳನ್ನೂ ಅಲ್ಪಪ್ರಾಣ ಚಿಹ್ನೆಗಳ ಹೊಕ್ಕಳು ಸೀಳಿಯೇ ಮಾಡಿಕೊಳ್ಳುವುದು–ಛ=ಚ಼; ಭ=ಬ಼. ಈ ಸಣ್ಣ ಮಾರ್ಪಾಟುಗಳನ್ನು ತಾಳ್ಮೆಯಿಂದಲೂ, ದೂರದೃಷ್ಟಿಯಿಂದಲೂ ನೋಡಿ ಎಲ್ಲರೂ ಒಪ್ಪಿಕೊಂಡು ಆದಷ್ಟು ಬೇಗ ಬಳಕೆಗೆ ತಂದರೆ ಎಳೆಯ ಮಕ್ಕಳ ಹೊರೆ, ಅಚ್ಚುಕೂಟಗಳ ತೊಡಕು ಅರ್ಧಕ್ಕರ್ಧ ಕಡಮೆಯಾಗುವುದೆಂದು ನಂಬಿದ್ದೇನೆ.

ಬೆಂಗಳೂರು
೧೭–೪–೧೯೩೮

ಶ್ರೀ

## ಎಂಟನೆಯ ಮುದ್ರಣದ ಮುನ್ನುಡಿ

ಕನ್ನಡ ಸಾಹಿತ್ಯ ಪರಿಷತ್ತಿನ ಜನಪ್ರಿಯ ಪ್ರಕಟಣೆ ಕನ್ನಡದ ಬಾವುಟದ ಎಂಟನೆಯ ಮುದ್ರಣವನ್ನು ಹೊರತರಲು ನಮಗೆ ತುಂಬ ಸಂತೋಷವಾಗುತ್ತದೆ.

ಕನ್ನಡದ ಹಿರಿಮೆಯನ್ನು ಸಾರುವ 'ಶ್ರೀ'ಯವರ ಈ ವಿದ್ವತ್ಕಾರ್ಯವನ್ನು ಇಂದಿಗೂ ನಾವು ಕೃತಜ್ಞತೆಯಿಂದ ನೆನೆಯುತ್ತೇವೆ.

ಬೆಂಗಳೂರು
೨೦–೧೦–೧೯೭೯

ಹಂಪ. ನಾಗರಾಜಯ್ಯ
ಅಧ್ಯಕ್ಷರು.

# ಕನ್‌ನಡದ ಬೕವುಟ

ಎೕರಿಸಿ, ಹೕರಿಸಿ, ಕನ್‌ನಡದ ಬೕವುಟ!
ಒೕಹೊ ಕನ್‌ನಡ ನೕಡು, ಅೕಹ ಕನ್‌ನಡ ನುಡಿ!
ಹೕರಿಸಿ, ತೋರಿಸಿ, ಕೆಚ್‌ಚೆದೆಯ ಬೕವುಟ!
ಗೕಳಿಯಲಿ ಫಟಪಟ, ದೕಳಿಯಲಿ ಚಟಚಟ,
ಉರಿಯಿತೋ ಉರಿಯಿತು ಹಗೆಯ ಹಟ ಮನೆ ಮಟ,
ಹೕಳ್ ಹೕಳ್ ಸುರಿಯಿತು ಹಗೆಯ ಬೀಡಕ್‌ಕಟ!

ಬೕಳ್ ಕನ್‌ನಡ ತೕಯ್!
ಎೕಳ್ ಕನ್‌ನಡ ತೕಯ್!
ಅೕಳ್ ಕನ್‌ನಡ ತೕಯ್!
ಕನ್‌ನಡಿಗರೊಡತಿ ಒೕ ರೕಜೇಶ್‌ವರೀ!

ಮೌರ್‌ಯ ಕಳಚುರ್‌ಯರು, ಗಂಗರು, ಕದಂಬರು,
ರಟ್‌ಟರು, ಚಳುಕ್‌ಯರು, ಹೊಯ್‌ಸಳರು, ಯೕದವರು,
ಇಳೆಗೆ ಮೕಲೕದವರು, ಬೕಣರು, ಜೕಣರು,
ಕೊಲೆಯ ಕೕಳ್‌ಕಿಚ್‌ಚಿಂಗೆ ತಂಪುಮಳೆ ತಳಿದು,
ಚೆಲುವು ನೆಲ ಸೕಲುತ್‌ತು, ಕಲೆಯ ಹೊಂಬೆಳೆಯಿಟ್‌ಟು,
ನಗಿಸಿದರು ನೕಡನು, ಕಡಿದು ಕಗ್‌ಗೕಡನು:
ಮೕನವನ ದೇವತೆಗೆ ತಂದ ಜಿನಭಕ್‌ತರು,
ಹಂಪೆಯ ವಿರೂಪಾಕ್‌ಷ ಪುತ್‌ರರು, ವಿರಕ್‌ತರು,
ವೀರನೕರೕಯಣನ ಕೃಪೆಯೊಳೕಸಕ್‌ತರು,
ಶ್‌ರೀ ಗೌರಿ ಕೕವಲಿಹ ರೕಯರನುರಕ್‌ತರು,

ನಮ್‌ಮ ತೕಯ್ ಮಕ್‌ಕಳು–
ಬೕಳ ಬೆಳ್‌ದಿಂಗಳಲಿ ಒಲಿದು ನಲಿದವರು–
ಬೇವೊ ಬೆಲ್‌ಲವೊ ಬರಲಿ, ಮಲ್‌ಲಿಗೆಯೊ ಮುಳ್‌ಳೋ,
ಬೕನ ಬೆಳಕಿನಲಿ, ಮೕನದಳುಕಿನಲಿ,
ಚೆನ್‌ನು ಬದುಕನು ಕುಣಿಸಿ, ಒಲಿದು ನಲಿದವರು–

ನಮ್‌ಮ ತೕಯಣುಗರು,
ಪಂಪನೋ, ರನ್‌ನನೋ, ಬಸವನೋ, ಮೕಧವನೊ,

ಅೕ ಅಕ್‌ಕಮಹದೇವಿ, ನೕರಣಪ್ಪ, ಚಿಕದೇವ,
ಜಕ್‌ಕಣ, ಹೊನ್‌ನಮ್‌ಮ, ನಮ್‌ಮಮ್‌ಮನೆಳೆಯರು,
ಚೆಲುವ ಚೆಲುವೆಯರು–ಚಿನ್‌ನದ ಚಿಣ್‌ಣರು,
ಕಲಿಗಳು, ಕಿಡಿಗಳು, ಗಂಡರು, ಮೊಂಡರು.
ನಲಿದೊಲಿದು ಬೆಚ್‌ಚೊಂದು ನೆಚ್‌ಚಿಂಗೆ ಮೆಚ್‌ಚಿಂಗೆ
ಕಿಚ್‌ಚಿನಲಿ ಹೕಯ್‌ದು ನಲ್‌ಲನ ಹಿಡಿದ ಹೆಂಡಿರು,
ಸತಿಗಳು, ಯತಿಗಳು, ವ್‌ರತಿಗಳು, ಕೃತಿಗಳು–
ಕನ್‌ನಡದ ಬೕವುಟವ ಹಿಡಿಯದವರೇರು ?
ಕನ್‌ಡದ ಬೕವುಟಕೆ ಮಡಿಯದವರೕರು ?
ನಮ್‌ಮ ಇೕ ಬೕವುಟಕೆ ಮಿಡಿಯದವರೕರು ?
ಹೇಳಿರೋ ಹೆಸರೊಂದು ನೆನಹಿನಲಿ ಸುಳಿದರೆ !
ಹುಡುಕಿರೋ ಹೇಡಿ ತೕನೊಬ್‌ಬ ಮನೆಗುಳಿದರೆ !
ಕನ್‌ನಡದ ನೕಡಲೕ,
ಕನ್‌ನಡದ ನುಡಿಯಲೕ
ಕನ್‌ನಡಿಗನೆದೆ ಕಡೆದ ತೆನೆಯರಲೕ |
ಬೆಳಕು ಹರಿಯಿತು ಎೕಳಿ,
ಇರುಳು ಸವೆಯಿತು ಏೕಳಿ,
ತೕಯ ಕರೆ ಕೇಳಿ,
ಎೕಳಿರೋ, ಎೕಳಿರೋ, ಬೕಳ ಬಲಿ ಬೕಳಿರೋ
ಎಲ್‌ಲೊಲುಮೆಯೋ ಕೂಡಿದೊಂದೊಲುಮೆ ತೕರಿರೋ,
ತೕಯುಳಿಯೆ ನೕನುಳಿದೆ,
ತೕಯಳಿಯೆ ನೕನಳಿದೆ,
ಮನೆ ಕೕಯಿ, ತುರು ಕೕಯಿ, ನೕಡ ಗುಡಿ ಗುಡಿ ಕೕಯಿ,
ಕೕಯಲೕರೆಯು, ಸೕಯಿ,
ಎಂದೆಲ್‌ಲ ಎೕಳಿರೋ–
ಅೕಹ ಕನ್‌ನಡ ನುಡಿ, ಅೕಹ ಕನ್‌ನಡ ನೕಡು,
ಹಿರಿಯ ಕನ್‌ನಡ ಪಡೆ, ಮರಿಯ ಕನ್‌ನಡ ಪಡೆ,
ಎೕಳಿರೋ, ಬೕಳಿರೋ.
ಕನ್‌ನಡದ ಬೕವುಟವ ಹಿಡಿಯಿರೋ, ನಡೆಯಿರೋ, |
ಎೕಳ್ ಕನ್‌ನಡ ತೕಯ್,
ಬೕಳ್ ಕನ್‌ನಡ ತೕಯ್,

ಅೀಳ್ ಕನ್‌ನಡ ತೀಯ್,
ಕನ್‌ನಡಿಗರೊಡತಿ. ಒೀ ರೀಜೇಶ್‌ವರಿೀ !
ಇಂದಿನದೆ ಹೇಳಿರೋ ಇೀ ನಮ್‌ಮ ಬೀವುಟ|
ಕುಂದಿಹುದೆ ನೋಡಿರೋ ಇೀ ನಮ್‌ಮ ಬೀವುಟ|
ಕಂದದಿದೆ ಇಂದಿಗುೀ ಕನ್‌ನಡದ ಬೀವುಟ!
ಎೀನೇನ ಕಂಡುದೋ ಬೀನೀಡಿ ಬೀವುಟ!
ಅೀವುದನು ಕೀಣದೋ ಜೀವ ಕಳೆ ಬೀವುಟ
ಕನ್‌ನಡದ ಬೀವುಟಗಳೊಂದೀದ ಬೀವುಟ|

ಎೀರಿಸಿ, ಹೀರಿಸಿ, ತೋರಿಸಿ ಬೀವುಟ|
ತೇಲೀಡು, ಮೇಲೀಡು, ಒೀಲೀಡು ಬೀವುಟ|
ಚೆಲುವೀಗು, ಗೆಲುವೀಗು, ಬಲವೀಗು ಬೀವುಟ|
ಹೊನ್‌ನೀಗಿ, ಹೆಣ್‌ಣೀಗಿ, ಹಸನೀದ ಮಣ್‌ಣೀಗಿ
ಹೊಸಹೊಸತು ಕಣ್‌ಣೀಗಿ, ಬೆಳಕೀಗಿ, ಬೆಳೆಯೀಗಿ,
ಕುೀಡುತಿಹ ಕನ್‌ನಡದ ಹೊಮ್‌ಮುಗೆಯ ಕೀವೀಗಿ,
ಪರಿಪರಿಯ ಹೊಂಬಗೆಯ ಹೆರಿಗೆಯುೀ ನೋವೀಗಿ,
ನೀಲುಮಡಿ ಕೃಷ್‌ಣನೀ ಕಟ್‌ಟೊಲುಮೆ ಹುೀವೀಗಿ,
ಬೀಳು ಎಲೆ ಬೀವುಟ
ಬೀಳ್ ಕನ್‌ನಡ ತೀಯ್,
ಎೀಳ್ ಕನ್‌ನಡ ತೀಯ್,
ಅೀಳ್ ಕನ್‌ನಡದ ತೀಯ್
ಕನ್‌ನಡಿಗರೊಡತಿ, ಒೀ ರೀಜೇಶ್‌ವರಿೀ !

ಶ್‌ರಿೀ

# ಪರಿವಿಡಿ

# ೧. ಶ್ರವಣಬೆಳ್ಗೊಳದ ಯತಿಗಳು

## ಸುಮಾರು ಕ್ರಿ. ಶ. ೭೦೦

೧

ಶ್ರೀ ಭದ್ರಭಾಹು ಸಚಂದ್ರಗುಪ್ತ ಮುನೀಂದ್ರ ಯುಗ್ಮದಿನೊಪ್ಪೆ ವಲ್
ಭದ್ರಮಾಗಿದ ಧರ್ಮಮಂದುವೞಿಕ್ಕೆ ವಂದಿನಿಸಲ್ಕಲೋ
ವಿದ್ರುಮಾಧರ ಶಾಂತಿಸೇನ ಮುನೀಶನಾಕ್ಕಿಎ ವೆಳ್ಗೊಳ[ತ್]
ಅದ್ರಿಮೇಲಶನಾದಿವಿಟ್ಟ ಪುನರ್ಭವಕ್ಕೆಱೆ ಆಗಿ[ದಾನ್]

೨

ಶ್ರೀಮಾಸೇನರ್ ಪರಮಪ್ರಭಾವ ಋಷಿಯರ್ ಕಟ್ವಪ್ಪಿನಾ ವೆಟ್ಟದುಳ್
ಶ್ರೀ ಸಂಗಂಗಳ ಪೇೞ್ದ ಸಿದ್ಧಸಮಯಂ ತಪ್ಪಾದೆ ನೋನ್ತುಂಬಿನಿನ್
ಪ್ರಾಸಾದಾಂತರಮಾನ್ ವಿಚಿತ್ರ ಕನಕ ಪ್ರಜ್ವಲ್ಯದಿನ್ ಮಿಕ್ಕುದಾನ್
ಸಾಸಿರ್ವರ್ ವರಪೂಜೆದಂದುಯೆ ಅವರ್ ಸ್ವರ್ಗಾಗ್ರಮಾನೇಱಿದಾರ್

೩

ನೆಱೆದಾದ ವ್ರತಶೀಲನೋನ್ಪಿ ಗುಣದಿಂ ಸ್ವಾಧ್ಯಾಯ ಸಂಪತ್ತಿನಿಂ
ಕಱೆಯಿಲ್ ನಲ್ತಪ ಧರ್ಮದಾ ಸಸಿಮತಿ ಶ್ರೀಗಂತಿಯರ್ ವಂದುಮೇಲ್
ಅಱಿದಾಯುಷ್ಯಮನೆಂತು ನೋಡೆನಗೆ ತಾನಿಂತೆಂದು ಕಟ್ವಪ್ಪಿನುಳ್
ತೊಱಿದಾರಾಧನೆ ನೋನ್ತು ತೀರ್ಥಗಿರಿಮೇಲ್ ಸ್ವರ್ಗಾಲಯಕ್ಕೇಱಿದಾರ್

೪

ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ ಮಂಜುವೋಲ್ ತೋಱಿ ಬೇಗಂ
ಪರಿಗುಂ ಶ್ರೀರೂಪ ಲೀಲಾ ಧನ ವಿಭವ ಮಹಾರಾಶಿಗಳ್ ನಿಲ್ಲವಾರ್ಗಂ
ಪರಮಾರ್ಥಂ ಮೆಚ್ಚಿನಾನೀ ಧರಣಿಯುಳಿರವಾನೆಂದು ಸಂನ್ಯಾಸನಂ ಗೆ
ಯ್ದುದ್ದುರುಸತ್ವನ್ ನಂದಿಸೇನಪ್ರವರ ಮುನಿವರನ್ ದೇವಲೋಕಕ್ಕೆ ಸಂದಾನ್

೫

ಶ್ರೀ ಅಗಟಿಯ ಮೋನಿ ಗುರುವರ ಶಿಷ್ಯ[ರ್] ಕೊಟ್ಟರದ ಗುಣಸೇನ ಗುರುವರ್ ನೋನ್ತು ಮುಡುಪ್ಪಿದಾರ್

೬

ಆದಿಯಱಿನಾಡ ಚಿತ್ತೂರ ಮೋನಿಗುರವಡಿಗಳ ಶಿಷಿತ್ತಿಯರ್ ನಾಗಮತಿ ಗನ್ತಿಯರ್ ಮೂಱು ತಿಂಗಳ್ ನೋನ್ತು ಮುಡಿಪ್ಪಿದರ್

## ೨. ಗುಣಗಳ್ನ (ಅದ್ವೈತ ಮುನಿ)

### ಕ್ರಿ. ಶ. ೧೦೭೧

ಶ್ರೀಮನ್ ಮುಕ್ತಿವಧೂ ಲೀ
ಲಾ ಮಂಗಳ ತಿಳಕನೆಸೆದನದ್ವಯ ಮಹಿಮೋ
ದ್ದಾಮಂ ಸಂಪೂರ್ಣಂ ವಿ
ದ್ಯಾಮೂರ್ತಿ ಜಿತಾತ್ಮನಕ್ಷರಂ ಗುಣಗಳ್ನಂ

ಅಚಳನ ದೆಸೆಯಿಂದುದಯಿಸು
ವ ಚರಾಚರಮಚಳನಿಂದೆ ಪೊಱಗಣವಲ್ತೆಂ
ದಚಳಿತಚಿತ್ತದಿನಿರ್ಪಂ
ಪ್ರಚಂಡನದ್ವೈತಿ ನಿರುಪಮಂ ಗುಣಗಳ್ನಂ

ಜ್ಞಾನಮೆ ನಾಂ ನಿನಗೊಡಲೆಸೆ
ವಾನಂದಂ ತೋರ್ಪುವೆಲ್ಲಮೆನ್ನ ನೆಲೆಲ್ ಮ
ತ್ತೇನುಂ ಬೇಱಿಲ್ಲೆಂಬನಿ
ಳಾನುತನದ್ವೈತಶೇಖರಂ ಗುಣಗಳ್ನಂ

ಮುಕ್ತಿಶ್ರೀ ಸತಿಗನುರಕ್ತಂ ಸಂಸಾರ ವಿ
ರಕ್ತಂ ನಿರ್ವಿಷಯಂ ನಿರಪೇಕ್ಷಂ ಶುಚಿ ಜೀವ
ನ್ಮುಕ್ತಂ ನಿರ್ವಾಣಿ ಗುಣಗಳ್ನಂ

ಅಱಿವಣ್ಮ ವೈರಾಗ್ಯಂ ತಱಿಸಲವಭ್ಯಾಸಂ
ನೆಱೆ ಭಕ್ತಿ ಶಾಂತಿ ಧೃತಿ ತುಷ್ಟಿಯೆಂಬಿವ
ಕೆಱೆವಟ್ಟಾಗಿೞ್ದಂ ಗುಣಗಳ್ಳಂ

ದೊರೆಕೊಂಡೀ ದೇಹದೊಳ್ ಮೋಹಮನೆಲೆ ಗುಣಗಳ್ಳಾರ್ಯ ನೀಂ ಮಾಣ್ದು ಬೆಂಕೊಂ
ಡರಿಷಡ್ವರ್ಗಂಗಳಂ ಭೇದಮನಿಱಿದಳಿಪಂ ಬಿಟ್ಟು ಕರ್ಮಂಗಳೆಲ್ಲಂ
ಬೆರಸಾನೆಂದಿರ್ಪಹಂಕಾರಮನವಯವದಿಂ ಸುಟ್ಟು ಸಾನಂದದಿಂದಂ
ಪರಿಪೂರ್ಣಜ್ಯೋತಿ ನೀನಾಗಿರೆ ಬಿಡುವಳೆ ಪೇೞ್ ಮುಕ್ತಿ ನಿನ್ನಂ ಮುನೀಂದ್ರಾ

## ೩. ಗಂಗರಾಜ (ನೀತಿಮಾರ್ಗ)

### ಕ್ರಿ. ಶ. ೯೨೧?

ಸ್ವಸ್ತಿ ನೀತಿಮಾರ್ಗ ಕೊಂಗುಣಿವರ್ಮ ಧರ್ಮಮಹಾರಾಜಾಧಿರಾಜ ಕೋವಳಾಲ ಪುರವರೇಶ್ವರ ನಂದಗಿರಿನಾಥ ಶ್ರೀಮತ್ ಪೆರ್ಮ[F]ನಡಿಗಳ್. ಸ್ವರ್ಗಮೇಱಿದ[ರ್]ಏಱಿದೊಡೆ ಪೆರ್ಮಾ[F]ನಡಿಗಳ ಮನೆಮಗತ್ತಿನ್ ಅಗರಯ್ಯಂ ನೀತಿಮಾರ್ಗ ಪೆರ್ಮ[F]ನಡಿಗೆ ಕಿೞ್ಗಂತೆಯಾದಂ ಪೆರ್ಮ[F]ನಡಿಗಳ ಸುಪುತ್ರ[ರ್] ಸತ್ಯವಾಕ್ಯ ಪೆರ್ಮ[F]ನಡಿಗಳ್ ಗುೞ್ದವೀದಿಯ ಕಲ್ನಾಡಕೊಟ್ಟದು ಕಪ್ಪಹಳ್ಳಿ ಪರಿಹಾರ[ಂ] ಇದನೞಿದೊನ್ ವಾರಣಾಸಿಯನೞಿದಂ . . .ಮಾಪಾತಗನ್

## ೪. ರಾಷ್ಟ್ರಕೂಟರಾಜ (ಇಂದ್ರ)

### ಕ್ರಿ. ಶ. ೯೮೨

ಸಂಸಾರವನಮಧ್ಯೇಸ್ಮಿನ್ ಋಜೂಂಸ್ತದ್ಗ್ಗಾನ್ ಜನದ್ರುಮಾನ್
ಆಲೋಕ್ಯಾಲೋಕ್ಯ ಸದ್ವೃತ್ತಾನ್ ಛಿನತ್ತಿ ಯಮತಕ್ಷಕಃ

ಶ್ರೀರಾಜತ್ ಕೃಷ್ಣರಾಜೇಂದ್ರನ ಮಗನ ಮಗಂ ಸತ್ಯಶೌಚದ್ವಯಾಳಂ
ಕಾರಂ ಶ್ರೀ ಗಂಗ ಗಾಂಗೇಯನ ಮಗಳ ಮಗಂ ವೀರ ಲಕ್ಷ್ಮೀವಿಳಾಸಾ
ಗಾರಂ ಶ್ರೀ ರಾಜಚೂಡಾಮಣಿಯುಳಿಯನಿದೇಂ ಪೆಂಪೊ ಪೇೞೆಂದಲಂಪಿಂ
ಭೂರಿಕ್ಷ್ಮಾಚಕ್ರಮುಂ ಬಣ್ಣಿಸೆ ಸಲೆ ನೆಗೞ್ದಂ ರಟ್ಟಕಂದರ್ಪದೇವಂ

ಇಱಿಯಲ್ಕಣ್ಮ್ರವರೀಯಲಾಱರರೆಬರ್ ಪೂಣ್ದೀವರಾರಾನುಮಾಂ
ತಿಱಿಯಲ್ಕಣ್ಮ್ರರದಾವ ಗಂಡಗುಣಮಾವೌದಾರ್ಯಮೆಂದಳ್ಕದಾಂ
ತಿಱಿವಣ್ಮ್ರಂ ಪಿರಿದೀವ ಪೆಂಪುಮೆಸೆದೊಪ್ಪಿಱ್ಪುವಾರ್ ಬಣ್ಣಿಸಲ್
ನೆಱೆವರ್ ಬೀರದ ಚಾಗದುನ್ನತಿಕೆಯುಂ ಶ್ರೀ ರಾಜಮಾರ್ತಂಡನಾ

ಕೆಡದ ಜಸಕ್ಕೆ ತಾನೆ ಗುಱಿಯಾದ ಚಲಂ ನೆರೆದರ್ಥಿಗರ್ಥಮುಂ
ಕುಡುವ ಚಲಂ ತೊದಳ್ನುಡಿಯದಿರ್ಪ ಚಲಂ ಪರವೆಣ್ಣೊಳೋತೊಡಂ
ಬಡದ ಚಲಂ ಶರಣ್ಗೆ ವರೆ ಕಾವ ಚಲಂ ಪರಸೈನ್ಯಮುಂ ಪೆಱಂ
ಗೆಡೆಗುಡದಟ್ಟಿ ಕೊಲ್ವ ಚಲಮಾಳ್ದ ಚಲಂ ಚಲದಂಕಕಾಱನಾ

ಇರು ಪೆಱದೇನನಿನ್ ಪೊಗುೞುತಿಱ್ಪುದೀವ ನೆಗೞ್ತೆ ಕಲ್ಪಭೂ
ಮಿರುಹದಿನಗ್ಗಳಂ ನುಡಿ ಸುರಾಚಳದಿಂದಚಳಂ ಪರಾಕ್ರಮಂ
ಖರಕರತೇಜದಿಂ ಬಿಸಿದು ಚಾಗದ ನನ್ನಿಯ ಬೀರದಂದಮೀ
ದೊರೆತೆನೆ ಬಣ್ಣಿಸಲ್ ನೆಱೆವರಾರಳವಂ ಚಲದಂಕಕಾಱನಾ

ಪುಸಿವುದೆ ತಕ್ಕು ಕೊಟ್ಟಳಿಪಿ ಕೊಳ್ವುದೆಮುಂತಣಮನ್ಯನಾರಿಗಾ
ಟಿಸುವುದೆ ಚಿತ್ತಮೀಯದುದೆ ಬಿನ್ನಣಮಾರುಮನೆಯ್ದೆ ಕೂರ್ತು ಬಂ
ಚಿಸುವುದೆ ಕಲ್ತ ಕಲ್ಪಿಯೆನೆ ಮತ್ತವರಂ ಪೆಸರ್ಗೊಂಡದೆಂತು ಪೋ
ಲಿಸುವುದೋ ಪೇೞಿಮೀಗಡಿನ ರಾಜತನೂಜರೊಳಿಂದ್ರರಾಜನಂ

ನುಡಿವರ್ ಬೀರಮನೊಂದುಗಂಡು ಸೆಡೆವರ್ ಚಾಗಕ್ಕೆ ಮುಯ್ವಾಂಪರೀ
ವಡೆ ಪಲ್ಗಚ್ಚುವರಾಮೆ ಸೋಚಿಗಳೆಮೆಂದಿರ್ಪರ್ ಪರಸ್ತ್ರೀಯರೊಳ್
ಗಡಣಂ ನನ್ನಿಗೆ ಬೀಗುವರ್ ನುಡಿ ತೊದಳ್ ದೋಸಕ್ಕೆ ಪಕ್ಕಾದೊಡಂ
ಬಡ ಗಂಡರ್ ಕಲಿಕಾಲದೊಳ್ ಕಲಿಗಳೊಳ್ಗಂಡಂಬರಂ ಗಂಡರೇ

ಶ್ರೀಗೆ ವಿಜಯಕ್ಕೆ ವಿದ್ಯೆಗೆ
ಚಾಗಕ್ಕದಟಂಗೆ ಜಸಕೆ ಪೆಂಪಿಂಗಿನಿತ
ರ್ಕಾಗರಮಿದೆಂದು ಕಂದುಕ
ದಾಗಮದೊಳೆ ನೆಗೞ್ಗುಮಲ್ತೆ ಬೀರರ ಬೀರಂ

ಬಳಸುವೇಱುವ ಸುೞಿವಗಲ್ವಿಂತಪ್ಪ ಚಾರಣದೋಷಮಲ್ಲದೆ ಪೊಟ್ಟವ
ಟ್ಟಳೆಗೆ ಸಮನಾಗೆ ಗಿರಿಗೆಯು ಕೋಲ್ಮುಟ್ಟಿ ಮಿಗಲುಂ ನೇಲಲುಮಣ
ಮೀಯದಿಂತೊಂ
ದಳವಿಯೊಳ್ ಬರೆ ಪೊಱಗೊಳಗೆಡದೊಳಂ ಬಲದೊಳಂ ಕಡುಗಡುಪಿನ್ನೆ ಬರ್ಪ
ವಳಯಂದಪ್ಪಲೆ ಚಾರಿಸುವೋಜೆಯಂ ರಟ್ಟಕಂದರ್ಪನಂತಾವಂ ಬಲ್ಲಂ

ಮೆಳಸಿನನಿಲಿರಿದು(?)ಗಿರಿಗೆಯ
ನಳಿದೊರ್ಗೆಣ್ ಕೋಲೊಳೊಳಗೆ ಪೊಱಗಣೆ ಮೆಱೆವೊ(?)
ಳ್ಪಳವಡೆ ಚಾರಿಪ ಬಹಲಿಕೆ
ಯಳವಿದು ಕೇವಳಮೆ ಕೀರ್ತಿನಾರಾಯಣನಾ

ಎಱಕಮಲ್ಲದೆ ಪೊಲ್ಲದಾಗೆಱಗಿ ದೊರೆಕೊಂಡೆ ಕೊಳ್ವ ತೆಱನಲ್ಲದೆ
ನೆಱೆಯೆ ಬರಲೆ ತಕ್ಕಡಿಯಲ್ಲಿ ಬೀಸುವಲ್ಲಿಯೆ ಬೀಸಲಱಿದೆಯಿಲ್ಲ
ಪಱಿಯನಾದಿಟ್ಟೆ ಮುರಿವಲ್ಲಿ ಕಡುಪಿನೊಳ್ ಮುರಿದಯಿಲ್ಲಿಲ್ಲಿಯ ಬಿನ್ನಣವನ್
ನೆಱೆಯೆ ಕಲ್ಪದೆ ಬೀರರ ಬೀರನಂ ಗೆಡೆಗಳಾಭರಣನಂ ನೋಡಿ ಕಲ್ಲಾ

ಆಸುವನುಂ ಕೊಂಕುವನುಂ
ಬೀಸುವನುಂ ಗೆಡೆಯ ನೆಗಳ್ದ ತಕ್ಕಡಿಯೊಳಿನು
ತ್ರಾಸದೆಯುಂ ಕೊಂಕದೆಯುಂ
ಬೀಸದೆಯುಂ ಬಿದ್ದಮೆಱೆಗುವೆಮೆಱೆವ ಬೆಡಂಗಂ

ಕಾಲ್ಗಳ ಕಯ್ಗಳ ತುರಗದ
ಕಾಲ್ಗಳ ತಿಣಿವುಗಳೊಳಲ್ಲಿ ಬಂಚಿಸುತೆಱೆಗುಂ
ಗೆಲ್ಗುಮೆನೆ ನೆಗಳ್ದ ಮಾರ್ಗದೆ
ಗೆಲ್ಗುಮೆ ಪೆಣೆದಲ್ಲಿ ಕೀರ್ತಿನಾರಾಯಣನಾ

ವನಧಿ ನಭೋನಿಧಿ ಪ್ರಮಿತ ಸಂಖ್ಯೆ ಶಕಾವನಿಪಾಳಕಾಳಮಂ
ನೆನೆಯಿಸೆ ಚಿತ್ರಭಾನು ಪರಿವರ್ತಿಸೆ ಚೈತ್ರಸಿತೇತರಾಷ್ಟಮೀ
ದಿನಯುತ ಭೌಮವಾರದೊಳನಾಕುಳಚಿತ್ತದೆ ನೋಂತು ತಾಳ್ದಿದಂ
ಜನನುತನಿಂದ್ರರಾಜನಖಿಳಾಮರರಾಜ ಮಹಾವಿಭೂತಿಯಂ

## ೫. ದೇಕಬ್ಬೆ

### ಕ್ರಿ. ಶ. ೧೦೫೭

### ಮಾಸತಿಕಲ್ಲು

ಸ್ವಸ್ತಿಶ್ರೀ ಚೋಳರಾಜಂ ಸಕಲ ವಸುಧೆಯಂ ಕೊಂಡು ರಾಜೇಂದ್ರದೇವಂ
ದುಸ್ತ್ರಾರಿವ್ರಾತ ಘಾತಂ ನೆಗೞೆ ಬರಿಸಮಾಱಾಗೆ ಮತ್ತಂ ಶಕಾಬ್ದಂ
ವಿಸ್ತಾರಕ್ಕೊಂಬತೇೞೊಂಬತ್ತುಮೆನೆ ಬರಿಸಂ ಹೇಮಳಂಬಿ ಪ್ರಸಿದ್ಧಂ
ಸ್ವಸ್ತಂ ಮಾಸಂ ಗಡಂ ಕಾರ್ತಿಕಮುಸಿತದಿನಂ ದ್ವಾದಶೀ ಸೋಮವಾರಂ

ಸ್ವಸ್ತಿ ಶ್ರೀಮತ್ ಸಕಲ ಜ
ಗತ್‌ಸ್ತುತರವಚೋಗ್ರಣ್ಯರೂರ್ಜಿತ ಪುಣ್ಯರ್
ವಿಸ್ತಾರ ಚಾರು ವೀರರ
ಸಸ್ಥಿತರಿಱಿವೀವ ಕಾವ ನುಗುನಾಡಧಿಪರ್

ಎನಿಪ ಕುಲದಲ್ಲಿ ಪುಟ್ಟಿದ
ನನುಪಮನೆಱೆಯಂಗನವನ ನಿಜಸುತನೇಚಂ
ಮನುನಿಭನವಂಗೆ ಪುಟ್ಟಿದ
ತನೂಭವಂ ಜವನಿಯಮ್ಮನಱಿವಿಂಗಾರ್ಮ್ಯಂ

ಅಂತಾ ಜವನಯ್ಯಂಗಂ
ಕಾಂತಾಜನ ತಿಲಕಮೆನಿಪ ಜಾಕಬ್ಬೆಗಮೊ
ಳ್ಪಂ ತಳೆಯೆ ಪುಟ್ಟಿದಂ ರಿಪು
ಸಂತಾನ ನಗೇಂದ್ರವಿಳಯಪವಿಗಂ ರವಿಗಂ

ರವಿಗಂ ಪುಟ್ಟಿದನೊಡನು
ದ್ಭವವಾಯ್ತುಱಿವಱಿವಿನೊಡನೆ ಪುಟ್ಟಿದುದಾಯಂ
ಸವಸಂದಾಯದೊಡಂ ಸಂ
ಭವಮಾದುದು ಚಾಗಮಿಂತುಟುಂ ಬಿರುದುಂಟೇ

ಕುಡಿಯರ ವಲ್ಲಭಂ ಕುಡಿಯುರಾಭರಣಂ ನುಗುನಾಡ ರಾಮನೆಂ
ದಡೆ ಕಲಿಕಾಲ ಕರ್ಣನ ವಿನೋದದ ಚಾಗದ ಬೀರದಾರ್ಪನೀ
ಗಡಿನ ನಿಕೃಷ್ಟ ನಿರ್ಗುಣ ನಿಕೃತ್ಯ ನಿರಾಚರಣೇಟವೀಟರಂ
ಕಡುಜಡರೆಂತು ಪೋಲಿಪರೆ ಧನ್ಯನೆನಿಪ್ಪ ವಚೋಗ್ರಗಣ್ಯನಂ

ಚೋಳ ಪಲ್ಲವ ಪಾಂಡ್ಯ ಸಿಳಾಮೇಘ ಕೇರಳ ಸೊರಟ[ಗುರ್ಜರಕಾಂ]ಭೋಜ
ಲಾಳ ಗಜಪತಿ ಹಯಪತಿ ನರಪತಿಯೆನಿಪ ಮಹೀಪಾಳರಾಸ್ಥಾನದಲ್
ಕೇಳ ತನ್ನನೆ ನಟ ವಂದಿ ಮಾಗಧರ್ ಕೈಕೊಂಡು ಪೊಗಬಿಲ್ಕೆ ನೆಗೞ್ ಬಲ್ಲ
ಮೇಳಮಾಣಿಕವೆನಿಪ ಜಯಂಗೊಂಡ ಚೋಳ ಪೆರ್ಮಾಡಿಗಾವುಂಡಂ ತಕ್ಕಂ

ಪಲ್ಲವಸತ್ತಿಗೆ ಸಂಕಂ
ಝಲ್ಲಳಿ ಜಯಮಂಗಳಂಗಳಂ ಚೋಳಮಹೀ
ವಲ್ಲಭನಿತ್ತಡೆ ಕುಡಿಯರ
ವಲ್ಲಭನುಱೆ ಮಂಡಳೀಕಪದಮಂ ಪಡೆದಂ

ಕಡಲ ಕಡೆವರಮುಜಾಂಡದ
ಕುಡಿವರಮಾಶಾಗಜೇಂದ್ರದಂತುವರಂ ತ
ಳ್ತೊಡನೊಡನೆ ಪರ್ವಿ ಬಳೆದುದು
ಕುಡಿಯರ ವಲ್ಲಭನ ಕೀರ್ತಿಲತೆ ಕೋಮಳದಿಂ

ಮನುನಿಭನೆಡೆನಾಡಧಿಪತಿ
ವಿನೇಯನಿಧಿ ಸತ್ಯವಾಕ್ಯನಾಟ್ಕೋಜನ ಮು
ಖ್ಯನ ಕುಲವಧು ಭೂತಬ್ಬೆಗೆ
ಜನಿಯಿಸಿ ಕಲಿಕಾಲಸೀತೆವೆಸರಂ ಪಡೆದಳ್

ವನಿತಾರನ್ನಂ ಪೊನ್ನ
ಕ್ಕನಟ್ಸ್ತಿಯೆ ಮದುವೆಗೊಂಡು ಬೆಳತೂರಧಿಪಂ
ಮನುನಿಭನೆನೆ ನೆಗಟ್ವೇತನ
ವನಿತೆಗೆ ಭೂವನಿತೆಯೊಳಗೆ ಪೆಱರೆಣೆಯೊಳರೇ

ನಿರುಪಮ ಶೀಳದಿಂ ಗುಣದಿನುತ್ತಮದಾನದಿನಾತ್ಮಭಕ್ತಿಯಿಂ
ಗಿರಿಸುತೆ ರಂಭೆ ಮೇನಕೆ ಸರಸ್ವತಿ ರುಗ್ಮಿಣಿ ಸತ್ಯಭಾಮೆಯೊಳ್
ದೊರೆಯೆನಲೊಲ್ಲದೀಗಡಿನ ದುಷ್ಟ ಕನಿಷ್ಠ ದುಶೀಲ ದುರ್ಗುಣಾ
ಧರೆಯರನೆಂತು ಪೋಲಿಪರೆ ನಿರ್ಮಳಚಿತ್ತದ ಪೊನ್ನಕಬ್ಬೆಯಂ

ಚಾರುಚಾರಿತ್ರೆ ನಯವಿನಯಾಕರೆ ಗೋತ್ರಪವಿತ್ರೆ ಸುಶೀಲಯುಕ್ತೆ
ನಾರೀಜನರನ್ನಮೆನಿಪ ಪೊನ್ನಬ್ಬೆಗಂ ರವಿಗಂಗಂ ಪುಟ್ಟಿದ ದೇಕಬ್ಬೆಯಂ
ವೀ]ರಂ ನವಿಲೆನಾಡಧಿಪತಿ ಕುಱುವಂದಗುಲದ ಪೆರ್ವಯಲಾತನೇಚಂಗೀಯೆ
ವಾರಿಜಾನನೆ ವಿನಯಚಿಂತಾಮಣಿ ಪತಿಹಿತೆಯೊಡಗೂಡಿ ಸುಖದಿನಿಬ್ಬು

ಜೆಟ್ಟಿಗನೆನೆ ನೆಗರ್ದಹಿತಘ
ರಟ್ಟಂ ಸುಖಮಿಬ್ಬು ತನ್ನ ದಾಯಿಗರಂ ತ
ಳ್ತೊಟ್ಟಜೆಯಿನಿಱಿದಡವನಂ
ನೆಟ್ಟನೆ ತಲೆಕಾಡಲುಯ್ದು ಕೊಂದಂ ನರಪಂ

ಕಲಿಕಾಲವೇಳನೆನಿಸಿದ
ಕಲಿ ಚಾಗಿಯನಿಱಿದು ಕೊಂದರೆಂಬುದು ಮಾತಂ
ಲಲಿತಾಂಗಿ ಕೇಳ್ದು ರವಿಗನ
ಕುಲದೀಪಕಿ ಸಾಯಲೆಂದು ಕೊಂಡಕೆ ನಡೆದಳ್

ತಂದೆಯುಮಬ್ಬೆಯುಮೊಡನೆಯು
ಬಂಧುಗಳುಂ ಬಂದು ಮಗಳೆ ಸಾಯದೆ ಮಾಣ್ ನೀ
ನೆಂದೆಲ್ಲಂ ಕಾಲ್ವಿಡಿದಡ
ನಿಂದಿತೆ ದೇಕಬ್ಬೆ ಮುನಿದು ಬಗ್ಗಿಸಿ ನುಡಿದಳ್

ನುಗುನಾಡಧಿಪತಿ ರವಿಗನ
ಮಗಳಾಗಿಯುಮಂತೆ ನವಿಲೆನಾಡಧಿಪತಿಗಾಂ
ನೆಗಱ್ತೆ ಸತಿಯಾಗಿ ಬಾೞ್ವುದು
ಬಗೆದರ್ಪಿನೆ ಕೊಟ್ಟ ಕೊಂಡ ಮನೆಯಸಮಱಿಯಲ್

ಎಂದು ಪರಿಚ್ಛೇದಿಸಿ ನಯ
ದಿಂದಂ ದೇವಂಗೆ ತೋಂಟಖಂಡದ ಮಣ್ಣಂ
ನಂದಾದೀವಿಗಿತ್ತರ
ವಿಂದಾನನೆ ಸಲೆ ನಿವೇದ್ಯಕೆಂದನುನಯದಿಂ

ಮಡದಿ ಸಲೆಗೇಳಿ ಗೞ್ದಿಯು
ಪಡುವಣ ಕಡೆಯಲ್ಲಿ ತೆಂಕಲಯ್ಗೊಳ ಬೆಳೆಯುಂ
ಕಡುಗೂರ್ತು ಕೊಟ್ಟು ನುಗುನಾ
ಡೊಡೆಯನ ಕುಲಪುತ್ರಿ ಪೆೞ್ಚಿ ಮತ್ತಂ ಮತ್ತಂ

ನೆರೆದೆಲ್ಲಂ ಬೇಡ ಮಾಣೆಂದಡೆ ನುಡಿಯದಿರಿಂ ಪೋಗಿಮಾಂ ಮಾಣೆನೆಂದಾ
ದರದಿಂದಂ ಭೂಮಿ ಪೊಂಪುಟ್ಟುಗೆ ಪಸು ಧನಮಂ ನೀಡುತಂ . . .ದೇ
ವರ ದೇವಂಗೞ್ತಿಯಿಂ ಕುಮ್ಮಗಿದುರಿವುರಿಯಂ ಪೊಕ್ಕು ದೇಕಬ್ಬೆ ತನ್ನಂ
ಧರೆಯೆಲ್ಲಂ ಮೆಚ್ಚಿ ನಿಚ್ಚಂ ಪೊಗೞೆ ನೆಗೞುತುಂ ದೇವಲೋಕಕ್ಕೆವೋದಳ್

ಶ್ರೀರಮಣಿ ಗೌರಿ ಶಚಿ ಧಾರಿಣಿಯ ಪುತ್ರಿ ರತಿ ಭೂರಮಣಿಯುಂದದ
ಸರೂಪವಱಿವೊಳ್ಪಾ
ದಾರೆ ಜಯಧಾರೆ ಜಸಧಾರೆ ನಯಧಾರೆ ಭಯಹಾರೆ ಪತಿಭಕ್ತೆ ಧೃತಶಕ್ತೆಯೆನೆ ಸಂದೀ
ವೀರನಿಧಿಯುಂ ಚಲದ ವಾರನಿಧಿಯುಂ ಗುಣದ ಚಾರುನಿಧಿಯುಂ ನೆಗೞ್ದದೇ
ಕಲೆಯನಿಂತೀ
ನಾರಿಜನರನ್ನಮನದಾರೋ ಮಱೆವರ್ ಸಕಳ ಧಾರಿಣಿಯೊಳಿಂತು ವರಕಾಂತೆ
ದೊರೆಯಾವಳ್

ಪಂಡಿತಾಶ್ರಯಂ ನುಗುನಾಡ ರಾಘವಂ ಮುನಿವರ ಸಿಂಗ ಮೋಚಕದಾವಳಂ ಚಂಡವಿಕ್ರಮಂ ಕುಡಿಯರ ವಲ್ಲಭಂ ಕಲಿಕಾಲಕರ್ಣಂ ಮಚ್ಚರಿಪವರ ಗಂಡಂ ವಂದಿ ಚಿಂತಾಮಣಿ ಶಿವಪಾದಶೇಖರಂ ನಿಜಸುತೆಗನುರಾಗದಿಂ ಮಂಡಲಕ್ಕೆಲ್ಲಂ ಪಡಿಛಂದವಾಗೆ ಶಿಲಾಸ್ತಂಭಂ ಶಾಸನವಾಗೆ ನಟ್ಟಂ

ಶ್ರೀ ದೇಕಬ್ಬೆ ಮಹಾದೇವರ್ಗೆ ಬಿಟ್ಟ ಪೊರಬೊಲಂ ತೋಂಟಖಂಡಮುಮಂ ನಿರ್ಮಾಣಮಱಿಕೆಱಿಯ ತೆಂಕಣ ಕಡೆಯಲ್ ಆಯ್ದು ಕೊಳಗ ಗಱ್ದೆಯುಮಂ ಈ ವಂಸದಲ್ ಪುಟ್ಟಿದವರ್ ಕಾದಿರಿಸುಗೆ ಸಲಿಸದವರ್ ನರಕಭಾಜನರಪ್ಪರ್

## ೬. ತುರುಗೋಳು–ಗಡಿಗಾಳಗ

### ವೀರಗಲ್ಲು

### ೧. ಸುಮಾರು ಕ್ರಿ. ಶ. ೯೦೦

ಸ್ವಸ್ತಿಶ್ರೀ ನಂದಿವೆಮ್ಮನ್ ಪೆರ್ಬಟ್ಟಮಾಳ ಎಱ್ತಿನ ಪುಯ್ಯಲುಳ್. . . . ಪುಣ್ಯಪವಿತ್ರನ್ ಎಱಿದು ವಿಟ್ಟಾನ್

### ೨. ಸುಮಾರು ಕ್ರಿ. ಶ. ೯೨೫

ಸ್ವಸ್ತಿ ಸಮಧಿಗತ ಪಂಚಮಾಶಬ್ದ ಪಲ್ಲವಕುಲಾನ್ವಯಂ ಶ್ರೀಮತ್ ಅಣ್ಣಯ್ಯ ಬೀರನೊಲಂಬಂ ರಾಜ್ಯಂಗೆಯ್ಯೆ ಪ್ರಚಂಡದಂಡನಾಯಕನ ಮಗಂ ಗೊಗ್ಗಿ ಉಱಿಲ್ ಮಱಿಯನಾಳುತ್ತಿರೆ ಊರ ಹರಿ ಬಂದು ಕಾದೆ ಮಱಿವೊಕ್ಕೋನಂ ಕಾದು ಕಱಿಪ್ಪಿ ವೈರಿಬಲಕ್ಕೆ ಇದಿರಂ ನಡೆದು ಸತ್ತು ಯಶಮಂ ಪಡೆದಂ

ಒಡನೆಯುವರೊಂದೆ ಮಾರ್ಬಲ
ಮೆಡೆಮಡಗದೆ ಪೊಗಱಿ ತಾಗಿ ತಳ್ತಿಱಿದು ಯಶಂ
ಬಡೆದಂ ಗೊಗ್ಗಿ ದಲೆಂಬುದು
ಪಡೆಮಾತೆನಲಾಯ್ತು ಭುವನದೊಳಗುಂ ಪೊಱಗುಂ

### ೩. ಕ್ರಿ. ಶ. ೧೧೫೬

ಸ್ವಸ್ತಿ ಶ್ರೀಮಚ್ಚಾಳುಕ್ಯಚಕ್ರವರ್ತಿ ತ್ರೈಲೋಕ್ಯಮಲ್ಲದೇವಂ ಸುಖದಿಂ ರಾಜ್ಯಂಗೆಯ್ಯುತ್ತಿರೆ ಶಕನೃಪ ಕಾಳಾತೀತ ಸಂವತ್ಸರಂಗಳು ೧೦೭೭ನೆಯ ಯುವ

ಸಂವತ್ಸರದಧಿಕಫಾಲ್ಗುಣ ಬಹುಳ ೩ ಸೋಮವಾರದಂದು ಶ್ರೀಮನ್ಮಹಾಮಂಡಳೇಶ್ವರಂ ಜಗದೇವರಸರ ಬೆಸದಿಂ ಮದಸಾಲೆಯ ಕಾಳರಸಂ ಸಮಸ್ತ ಸಾಮಾತ್ರಿಯಂ ಬೆರಸು ಬಂದು ಶ್ರೀಮದನಾದಿಯಗ್ರಹಾರಂ ಕುಪ್ಪೆಗಡೆಯಹಳ್ಳಿ ಕೊರಕೋಡನಿಱಿದು ತುಱುವಂ ಕೊಂಡುಡೆಯುಚ್ಚಿ ಹೋಹಾಗಳಲ್ಲಿ ಹುಟ್ಟಿದ ಭಾವಗಾವುಂಡನ ಮಗಂದಿರು ದೇವಗಾವುಂಡನುಂ ಮಲ್ಲಗಾವುಂಡನುಂ ಬಿಲ್ಲುಮಂಬುಮಂ ಕೊಂಡಿರ್ಪ್ಪರುಂ ಹೆಬ್ಬಾಗಿಲೊಳಡ್ಡಂನಿಂದು ಗುಹೆಯ ಬಾಗಿಲೊಳು ಸಿಂಹನಿರ್ಪಂತೆ ತಾಗಿ ತಳ್ತಿಸುವಾಗಳು ಕಾರ ಮಳೆ ಕಱೆದಂತೆಯುಂ ಕಡಂದುಱ ಹುಟ್ಟಿಯ ಕೆಣಕಿದಂತೆಯುಂ ಕವಿದ ಕೋಲ ಬಾಯೊಳಂ ಕಾಲ ಬಾಯೊಳಂ ಜವನೊಕ್ಕಲಿಕ್ಕಿದಂತೆ ತೊತ್ತಳದುಳಿದ ವೋಲು ತಂಕಯ್ಯ ಸರಮಂ ಬಿಲ್ಲ ತಿರುವಂ ಪಱಿವನ್ನವೆಚ್ಚು ನೆಱೆಯದೆ ಕಟ್ಟಿದ ಲಗಂ ಕಿತ್ತು. . . .ಕುಱಿಯ ಹಿಂಡಂ ತೋಳಂ ಪೊಕ್ಕಂತೆಯುಂ ಕಬ್ಬುದೋಂಟವನಾನೆ ಪೊಕ್ಕಂತೆಯುಂ ಪೊಕ್ಕು ಕುತ್ತಿ ನೂಂಕುತ್ತ ಬಪ್ಪಾಗಳು

ಮಲೆದಿದಿರಾಂತ ಮಾರ್ವಲವನಳ್ಕುಱೆ ತಾಗಿ ಭುಜಪ್ರತಾಪದಿಂ
ದಲಗನೆ ಕಿರ್ತು ಪೊಯ್ಯೆ ನಿರತಂ ಕಣಕಾಲ್ ಮೊಳಕಾಲ್ ಮುಖಂ ಭುಜಂ
ತಲೆಬಳೆಯಾಗೆ ಸಂಬಳಿತವೋಪಿನವೊಂದೆರಡಟ್ಟಿಯೋಡಲುಂ
ತೊಲಗದೆ ನಿಂದು ತಳ್ತಿಱಿದರಿರ್ಬರುಮಾಹವ ರಂಗಭೂಮಿಯೊಳ್

ಅಂತವರಿಬ್ಬರುಂ ಪೋಗದೆ ನಿಂದುದಂ ಕಂಡು ಪೊ[ï]ರಿದಾಳುಕುದುರೆಯ ಮೊರ್ಬಂ ತಾಗಿಯೆ ಸಲ್ವಿಱಿಯಲುಂ(?) ಕೋಲ್ ಕೊಂತಂಗಳ್ಗೂಡಾಗಿ ಬಿರ್ದು ಸುರಲೋಕಪ್ರಾಪ್ತರಾದಡವರಿರ್ಬರ ಪೆಣನಂ ಮೆಟ್ಟಿ ತುಱು ಪರಿಯಲವರಿಬ್ಬರಿಂ ಕಿಱಿಯ ಬೊಪ್ಪಗಾವುಂಡ ತಮ್ಮಣ್ಣಂದಿರಿಬ್ಬರ ಕಳೇಬರವಂ ಕಂಡು ಸೈರಿಸಲಾಱದೆ ನಿಮ್ಮಾದುದನಪ್ಪೆನಲ್ಲದೊಡೇಂ ತುಱುವಂ ಮಗುಳ್ಚಿ ಬಪ್ಪೆನೆಂದೊಂದೆ ಮೆಯ್ಯೊಳು ಹಿಂದ ಹತ್ತಲಾತಂಗೆ ಪಡಿಬಲದಾಗಿ ಮಂಡಳಿಕಂ ವುದ್ದರೆ ಯೆಕ್ಕಲರಸನಾಳ್ಕುದುರೆಯಂ ಹೇಳಲಾ ನೆರವಂ ಕೂಡಿಕೊಂಡು ಹಾಲ್ಗಟ್ಟದ ಬಯಲಲೊಡ್ಡನೊಡ್ಡಿದರಿಬಲವಂ ಬೊಪ್ಪಗವುಂಡ ಕೊಂದು ತುಱುವಂ ಮಗುಳ್ಚಿಕೊಂಡು ಬಂದಣ್ಣಂದಿರಂ ಸಂಸ್ಕಾರಿಸಿ ಜಳದಾನಕ್ರಿಯೆಯಂ ಪರೋಕ್ಷವಿನಯಮುಮಂ ಮಾಡಿ ಇರ್ಬರ್ಗಂ ಕಲ್ಲಂ ನಿಱಿಸಿದಲ್ಲಿ ಮಂಗಳ ಮಹಾಶ್ರೀ ಶ್ರೀ.

## ೪. ಕ್ರಿ. ಶ. ೮೦೦

ಸ್ವಸ್ತಿ ಪ್ರಭೂತವರ್ಷ ಶ್ರೀಪೃಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕ ಶ್ರೀ ಗೋಇಂದರಸರ್ ಚತುಸ್ಸಮುದ್ರಾಂತ ವಸುಧೆಯಾನ್ ಧವಳೈಕ ಛತ್ರಛಾಯೆಯಿಂದಾಳೆ| ಬನವಾಸಿಮಂಡಲಮಾನಾಸಮುದ್ರಾಂತಂ ರಾಜಾದಿತ್ಯ

ರಾಸರ್ ಆಳಿ | ಆಳುವ ಖೇಡಮಱುಸಾಸಿರಮುಮಾನ್ ಚಿತ್ರವಾಹನನಾಳುತ್ತಂ ಬಾಯ್ಕ್ಕೇಳದಿರೆ ಮುನಿದು ಕೊಲ್ಲಿ ಪಲ್ಲವನೊೞಂಬಂ ನೊೞಂಬರಾದಿತ್ಯನನ್ ವೆಸ ಸಲಾ ಕಾಕರಾಸರುಮೆೞ್ದು ಪೆರ್ಗುಂಜಿಯ ಕೋಟೆಯಾನ್ ರೋಹಿಸಿ ಬಿಟ್ಟ ಎರಡುಂ ಬಲದ ವೀರಭಟರ್ಕಳೊಟ್ಟು ಪೊಱಮಟ್ಟು ಬಿಲ್ವಿಲ್ಲೊಳ್ ಕುದುರೆ ಕುದುರೆ ಯೊಳ್ ಕಿಟ್ಟಿ ಅತಿತುಮುಲಕಾಳೆಗಂ ಪೆಱ್ಚೆ ಬಲದಕಯ್ಯಂ ಚಿತ್ರವಾಹನನೊತ್ತಿಪು ಗುತ್ತಂದು ಕಾದಿಸೆ ಕಂಡು ಕುಲಮುದ್ದ ನೀನೀಕಯ್ಯ ಪೊಕ್ಕು ಕಾದೆಂದು ಬೆಸಸೆ ಪ್ರಸಾದಮೆಂದೆಯ್ದಿ ಕಿಟ್ಟಿ ಕಾದಿ ಮಱುವಕ್ಕದವರ ಮೆಯ್ಮೆಯ್ಯಂಬಾಗೆ ಎಚ್ಚೋಡಿಸಿ ಆ ಕಯ್ಯಂ ಗೆಲ್ದು ತಾನುಂ ಪಲವುಂ [ಏ]ಸುವೆತ್ತು ಎಯ್ವೊದೆದಪ್ಪಿದಪ್ಪೊಲ್ ಕಣೆ ಪಂಜರದೊಳೆಱಗಿ ಭೀಷ್ಮನ್ ವಿೞ್ದಂತೆ ನೆಲ ಮುಟ್ಟದೆ ಬಿೞ್ದೋನಾನ್ ದೇವಗಣಿಕೆ ಯರರ್ಘ್ಯಂಬಿಡಿದು ಬಂದಿದಿರ್ಗೊಂಡುಯೆ ವೀರಲೋಕಕ್ಕೆ ಸಂದೋನ್ ! ಅರ ಬದ್ದಗಿಯರವಾದ ಪುಲಿಮಾಡಿದಾನ್ ಪರಿಗೆಯ ಬಂದುಗಿಯರ್ ಈ ಊರ್ಗೆ ಬಂದು ಆರಿದರೊಳ್ ಛಲಮೆನೆ ನಾಲ್ಕೆೞ್ತನ ಬಲನ ಕಿಡಿಸಿ ಆಱೆೞ್ತು ಮಾಡಿ ಮತ್ತಂ ನಿಲ ಲಾರದೆ ಓಡಿದ ಅದನ್ನವೞಿಕೆ ಕುಲಮುದ್ದಗಾಮಿಗಾಗೆ ಅರಸರ್ ದಯೆಗೆಯ್ದು ಪೂರ್ವಾಚಾರದ ನಾಲ್ಕೆೞ್ತನೊಳ್ವೊಱಿಸಿ ಗೞ್ದೆಯನಳದು ದಯೆಗೆಯ್ದು ಬಿಟ್ಟ ಕುಂಥಗೆ ಸೇವೆಯ ಕಲಿಯಮ್ಮ ಬೆಳ್ಮಣಿಯ ಪದುಮಣ್ಣನ್ ಕರ್ಬುರಸೋಮದಿ ಮಿಟ್ಟಸೆಯ ನರಸಿಂಗನ್ ಸಿಮ್ಮನೂರ ಕಿಳ್ಳಮ್ಮನ್ ಆಂಡುಗಿಯರಟ್ಟಗನ್ ಬೆದೆ ಮೆಟ್ಟಯಾಲಮ್ಮಾನ್ ಬಳ್ಳಿಗಾಮೆಯ ಗಾಮುಂಡನ್ ಗುಂದುಗುಡೆಯಾ ಸಾತ್ತು ಗಾಮುಂಡ ಇಂತೀ ಎನೆಬ್ಬರು ಶ್ರೀಕರಣ ಸಹಿತಂ ಬಿಟ್ಟಾರಿದನ್ ಕೆಡಿಪೋನುಂ ಕೆಡೆ ಬಾೞ್ವೋನುಂ ಪಂಚಮಹಾಪಾತಕಸಂಯುಕ್ತನಕ್ಕುಂ ಬಾರಣಾಸಿಯೊಳ್ ಸಾಸಿರ ಕವಿಲೆಯನ್ ಕೊಂದೋನ ಲೋಕಕ್ಕೆ ಸಂದೋನುಮಕ್ಕುಂ.

## ೭. ದೇವಾಲಯದ ದತ್ತಿ

### ಕ್ರಿ. ಶ. ೧೦೨೧

ಶ್ರೀ ಸ್ವಸ್ತಿ ಸಕವರಿಷ ವೊಂಬಯ್ನೂಱ ನಾಲ್ವತ್ತಮೂಱನೆಯ ರೌದ್ರಿ ಸಂವತ್ಸರದ ಆಷಾಡಮಾಸದ ಪುಣ್ಣಮೆ ಉತ್ತರಾಷಾಡ ನಕ್ಷತ್ರಂ ಮಕರ ಚಂದ್ರಂ ಬೃಹಸ್ಪತಿ ವಾರಂ ಶ್ರೀ ಮುಡಿಗೊಂಡ ರಾಜೇಂದ್ರಚೋೞಂ ರಾಜ್ಯಂಗೆಯ್ಯುತ್ತಿರೆ ಇಯಾಂಡು ಒಂಬತ್ತಾವುದಱುಳ್ ನುಗುನಾಡ ಒಱೆಯ ಬೆಳತೂರ ಒಡೆದು ಬಿೞ್ದು ಭೂಮಿಲಬ್ಬ ಮಾಗಿ ಕೆಟ್ಟ ದೇಗುಲಮಂ ಮಾಡಿಸಿ ಕಿೞ್ತುಪಟ್ಟ ಲಿಂಗಮಂ ಪ್ರತಿಷ್ಠೆಗೆಯ್ದು ಮುರುಗ ಸೆಟ್ಟಿಯ ಮಗಂ ಬಸವಯ್ಯಂ ರುದ್ರಹೋಮಂ ಗೆಯ್ದು ಸಹಸ್ರ ಭೋಜನಂ ಮಾಡಿ

ಬಲಿಯಂ ಕಳೆದು ಧರ್ಮಂಗೆಯ್ದು ಬೆಳತೂರ ಜವನಿಗಾವುಂಡನ ಮಗಂ ಜಯಂಗೊಂಡ ಚೋಟಿಪೆರ್ಮಾಡಿ ಗಾವುಂಡನಲ್ಲಿ ಮುರುಗಸೆಟ್ಟಿಯ ಮಾಗ್ಗಬ್ಬೆಯ ಮಗಂ ಸುಪುತ್ರಂ ಪುಟ್ಟಿದ ಬಸವಸೆಟ್ಟಿ ಪದಿನಯ್ದುಗಳ ನೀರ್ಮಣ್ಣು ಅಯ್ದುಗಳ ಪೂಂಬೊಲನುಂ ಪೊನ್ನಱಿ ಕೊಟ್ಟು ಮಣ್ಣಱಿಂ ಕೊಂಡು ಧಾರಾಪೂರ್ವಕದಿಂದ ಮೂರುಂ ಅಯ್ಮಣ್ಣಿ ಗರು ಮಱಿಯೆ ಈ ದೇಗುಲಕ್ಕೆ ಬಿಟ್ಟಂ ಬಸವಸೆಟ್ಟಿ ನಂದಾದೀವಿಗೆಗೆ ಕೊಟ್ಟಂ ಈ ವೃತ್ತಿಯನಳಿದವಂ ಈ ದೇಗುಲವುಂ ಕವಿಲೆಯುಂ ವಾರಣಾಸಿಯುಮನಳಿದ ಪಾತಕಕ್ಕೆ ಸಂದಂ.

## ೮. ಬುಕ್ಕರಾಯನ ಧರ್ಮಸಮದೃಷ್ಟಿ

ಕ್ರಿ. ಶ. ೧೩೬೮

### ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ

ಪಾಷಂಡ ಸಾಗರ ಮಹಾಬಡವಾಮುಖಾಗ್ನಿಃ
ಶ್ರೀ ರಂಗರಾಜ ಚರಣಾಂಬುಜ ಮೂಲದಾಸಃ
ಶ್ರೀ ವಿಷ್ಣುಲೋಕ ಮುನಿಮಂಟಪ ಮಾರ್ಗದಾಯೀ
ರಾಮಾನುಜೋ ವಿಜಯತೇ ಯತಿರಾಜರಾಜಃ

ಶಕವರ್ಷ ೧೨೯೦ನೆಯ ಕೀಲಕ ಸಂವತ್ಸರದ ಭಾದ್ರಪದ ಶು॥ ೧೦ ಬೃ॥ ಸ್ವಸ್ತಿ ಶ್ರೀಮನ್ಮಹಾಮಂಡಳೇಶ್ವರಂ ಅರಿರಾಯ ವಿಭಾಡ ಭಾಷೆಗೆ ತಪ್ಪುವ ರಾಯರ ಗಂಡ ಶ್ರೀ ವೀರಬುಕ್ಕರಾಯನು ಪೃಥ್ವೀರಾಜ್ಯವ ಮಾಡುವ ಕಾಲದಲ್ಲಿ ಜೈನರಿಗೂ ಭಕ್ತರಿಗೂ ಸಂವಾದದಲ್ಲಿ ಆನೆಯಗೊಂದಿ ಹೊಸಪಟ್ಟಣ ಪೆನುಗೊಂಡೆ ಕಲ್ಲೆಹದ ಪಟ್ಟಣವೊಳಗಾದ ಸಮಸ್ತ ನಾಡ ಭವ್ಯಜನಂಗಳು ಆ ಬುಕ್ಕರಾಯಂಗೆ ಭಕ್ತರು ಮಾಡುವ ಅನ್ಯಾಯಂಗಳನು ಬಿನ್ನಹಂ ಮಾಡಲಾಗಿ ಕೋವಿಲ್ ತಿರುಮಲೆಪೆರು ಮಾಳ್ ಕೋವಿಲ್ ತಿರುನಾರಾಯಣಪುರ ಮುಖ್ಯವಾದ ಸಕಳಾಚಾರ್ಯರೂ ಸಕಳ ಸಮಯಿಗಳೂ ಸಕಳ ಸಾತ್ವಿಕರೂ ಮೋಷ್ಟಿಕರು ತಿರುಪಣಿ ತಿರುವಿಡಿ ತಣ್ಣೀರವರು ನಾಲ್ವತ್ತೆಂಟು ಜನಂಗಳು ಸಾವಂತ ಬೋವಕ್ಕಳು ತಿರಿಕುಲ ಜಾಂಬುವಕುಲ ವೊಳಗಾದ ಹದಿನೆಂಟು ನಾಡ ಶ್ರೀ ವೈಷ್ಣವರ ಕೈಯ್ಯಲು ಮಹಾರಾಯನು ವೈಷ್ಣವ ದರ್ಶನಕ್ಕೆಯೂ ಜೈನದರ್ಶನಕ್ಕೆಯೂ ಭೇದವಿಲ್ಲವೆಂದು ರಾಯನು ವೈಷ್ಣವರ ಕೈಯಲು ಜೈನರ ಕೈವಿಡಿದುಕೊಟ್ಟು ಈ ಜೈನದರ್ಶನಕ್ಕೆ ಪೂರ್ವ ಮರ್ಯಾದೆಯಲು ಪಂಚಮಹಾವಾದ್ಯಂಗಳೂ ಕಳಶವೂ ಸಲುವುದು ಜೈನದರ್ಶನಕ್ಕೆ ಭಕ್ತರ ದೆಸೆಯಿಂದ ಹಾನಿವೃದ್ಧಿಯಾದರೂ ವೈಷ್ಣವ ಹಾನಿವೃದ್ಧಿಯಾಗಿ ಪಾಲಿಸುವರು ಈ

ಮರ್ಯಾದೆಯಲು ಎಲ್ಲಾ ರಾಜ್ಯದೊಳಗುಳ್ಳಂತಹ ಬಸ್ತಿಗಳಿಗೆ ಶ್ರೀ ವೈಷ್ಣವರು ಶಾಸನವ ನಟ್ಟು ಪಾಲಿಸುವರು ಚಂದ್ರಾರ್ಕಸ್ಥಾಯಿಯಾಗಿ ವೈಷ್ಣವ ಸಮಯವು ಜೈನದರ್ಶನವ ರಕ್ಷಿಸಿಕೊಂಡು ಬಹೆವು ವೈಷ್ಣವರೂ ಜೈನರೂ ಒಂದು ಭೇದವಾಗಿ ಕಾಣಲಾಗದು ಶ್ರೀ ತಿರುಮಲೆಯ ತಾತಯ್ಯಂಗಳು ಸಮಸ್ತ ರಾಜ್ಯದ ಭವ್ಯ ಜನಂಗಳ ಅನುಮತದಿಂದ ಬೆಳುಗುಳದ ತೀರ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತ ರಾಜ್ಯದೊಳಗುಳ್ಳಂತಹ ಜೈನರ ಬಾಗಿಲುಗಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣಕೊಟ್ಟು ಆ ಎತ್ತಿದ ಹೊನ್ನಿಂಗೆ ದೇವರ ಅಂಗರಕ್ಷೆಗೆ ಯಿಪ್ಪತ್ತಾಳನೂ ಸಂತವಿಟ್ಟು ಮಿಕ್ಕ ಹೊನ್ನಿಂಗೆ ಜೀರ್ಣಜಿನಾಲಯಂಗಳಿಗೆ ಸೊದೆಯನಿಕ್ಕುವುದು ಈ ಮರಿಯಾದೆಯಲು ಚಂದ್ರಾರ್ಕರುಳ್ಳನ್ನಂ ತಪ್ಪಲೀಯದೆ ವರ್ಷ ವರ್ಷಕ್ಕೆ ಕೊಟ್ಟು ಕೀರ್ತಿಯನೂ ಪುಣ್ಯವನೂ ಉಪಾರ್ಜಿಸಿಕೊಂಬುದು ಈ ಮಾಡಿದ ಕಟ್ಟಳೆಯನು ಆವನೊಬ್ಬನು ಮೀಱಿದವನು ರಾಜದ್ರೋಹಿ ಸಂಘಸಮುದಾಯಕ್ಕೆ ದ್ರೋಹಿ ತಪಸ್ವಿಯಾಗಲಿ ಗ್ರಾಮಿಣಿಯಾಗಲಿ ಈ ಧರ್ಮವ ಕೆಡಿಸಿದರಾದಡೆ ಗಂಗೆಯ ತಡಿಯಲ್ಲಿ ಕಪಿಲೆಯನೂ ಬ್ರಾಹ್ಮಣನನೂ ಕೊಂದ ಪಾಪದಲ್ಲಿ ಹೋಹರು.

ಸ್ವದ[ತ್ತಾ]ಂ ಪರದ [ತ್ತಾ]ಂ ವಾ ಯೋ ಹರೇ[ತ] ವಸುಂಧರಾ[ಂ]
ಷಷ್ಟಿವ[ರ]ರ್ಷ ಸಹಸ್ರಾಣಿ [ವಿಷ್ಠಾ]ಯಾಂ ಜಾಯತೇ ಕ್ರಿಮಿ[ಃ]

# ೧. ಕನ್ನಡ ನಾಡಿನ ಚೆಲುವು

## ನೃಪತುಂಗ : ಕವಿರಾಜಮಾರ್ಗ

### ಕ್ರಿ. ಶ. ೮೧೪ – ೮೭೭

ಕಾವೇರಿಯಿಂದಮಾ ಗೋ
ದಾವರಿವರಮಿರ್ದ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ....

ಅದಱೊಳಗಂ ಕಿಸುವೊಟಲಾ
ವಿದಿತ ಮಹಾಕೊಪಣ ನಗರದಾ ಪುರಿಗೆಱೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್

## ಪಂಪ : ವಿಕ್ರಮಾರ್ಜುನ ವಿಜಯ

### ಕ್ರಿ. ಶ. ೯೪೧

ಜಲ ಜಲನೊ[ಳ್ಪು]ತಿರ್ಪ ಪರಿಕಾಲ್ ಪರಿಕಾಲೊಳಳುರ್ಕೆಗೊಂಡ ನೆ
ಳ್ದಿಲ ಪೊಸವೂ ಪೊದಳ್ದ ಪೊಸನೆಯ್ದಿಲ ಕಂಪನೆ ಬೀಱಿ ಕಾಯ್ತ್ತ ಕೆಂ
ಲೆಯೊಳೆ ಜೋಲ್ವ ಶಾಳಿ[ನವ]ಶಾಳಿಗೆ ಪಾಯ್ವ ಶುಕಾಳಿ ತೋಱೆ ಕ
ಬ್ಬೊಲಗಳಿನೊಪ್ಪಿ ತೋಱೆ ಸಿರಿ ನೋಡುಗುಮಾ ವಿಷಯಾಂತರಾಳದೊಳ್

ಬೆಳೆದೆಱಗಿರ್ದ ಕಯ್ವೊಲನೆ ಕಯ್ವೊಲನಂ ಬಳಸಿರ್ದ ಪೂತ ಪೂ
ಗೊಳಗಳೆ ಪೂತ ಪೂಗೊಳಗಳಂ ಬಳಸಿರ್ದ ವಿಚಿತ್ರನಂದನಾ
ವಳಿಗಳೆ ನಂದನಾವಳಿಗಳಂ ಬಳಸಿರ್ದ ಮದಾಳಿ ಸಂಕುಲಂ
ಗಳ ವಿಷಯಾಂಗನಾಲುಳಿತ ಕುಂತಳದಂತೆವೊಲೊಪ್ಪಿ ತೋಱುಗುಂ

ಲಳಿತ ವಿಚಿತ್ರ ಪತ್ರ ಫಲ ಪುಷ್ಪಯುತಾಟವಿ ಸೊರ್ಕಿದಾನೆಯಂ
ಬೆಳೆವುದು[ದೇ]ವಮಾತೃಕಮೆನಿಪ್ಪ ಪೊಲಂ ನವಗಂಧ ಶಾಳಿಯಂ
ಬೆಳೆವುದು ರಮ್ಯ ನಂದನ ವನಾಳಿ ವಿಯೋಗಿ ಜನಕ್ಕೆ ಬೇಟಮಂ
ಬಳೆವುದು ನಾಡ ಕಾಡ ಬೆಳಸೀ ಬೆಳಸಾ ವಿಷಯಾಂತರಾಳದೊಳ್

ಆವಲರುಂ ಪಣ್ಣುಂ ಬೀ
ತೋವವು ಗಡ ಬೀಯುವಲ್ಲಿ ಮಲ್ಲಿಗೆಗಳುಮಿ
ಮ್ಮಾವುಗಳುಮೆಂದೊಡಿನ್ ಪೆಱ
ತಾವುದು ಸಂಸಾರ ಸಾರ ಸರ್ವಸ್ವ ಫಲಂ

ಮಿಡಿದೊಡೆ ತನಿಗರ್ಬು ರಸಂ
ಬಿಡುವುವು ಬಿರಿದೊಂದು ಮುಗುಳ ಕಂಪಿನೊಳೆ ಮೊಗಂ
ಗಿಡುವುವು ತುಂಬಿಗಳಟ್ಕಮೆ
ವಡುವುವು ಕುಡಿದೊಂದು ಪಣ್ಣ ರಸದೊಳೆ ಗಿಳಿಗಳ್

ಸುತ್ತಿಱಿದ ರಸದ ತೊಱೆಗಳೆ
ಮುತ್ತಿನ ಮಾಣಿಕದ ಪಲವುಮಾಗರಮೆ ಮದೋ
ನ್ಮತ್ತ ಮದಕರಿ ವನಂಗ[ಳೆ]
ಸುತ್ತಲುಮಾ ನಾಡ ಸಿರಿಯನೇನಂ ಪೊಗೞ್ವೆಂ

ಬನವಾಸಿ

ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ಪೂತ ಜಾತಿ ಸಂ
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಮೊಗಂ
ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋೞ್ಪೊಡಾವ ಬೆ
ಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿ ದೇಶದೊಳ್

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರವಾದ ಮಾನಿಸರೆ ಮಾನಿಸರಂತವರಾಗಿ ಪುಟ್ಟಲೇ
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿ ದೇಶದೊಳ್

ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ
ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ

## ಆಂಡಯ್ಯ : ಕಬ್ಬಿಗರ ಕಾವ

### ಸುಮಾರು ಕ್ರಿ. ಶ. ೧೨೩೫

ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ
ನೆಲವಂ ಮತ್ತಿನ ಮಾನಿಸರ್ ಪೊಗಟಲೇನಂ ಬಲ್ಲರೆಂಬೊಂದು ಬ
ಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾನಾಡು ಚೆಲ್ವಾಯ್ತು ಮೆ
ಲ್ಲೆಲರಿಂ ಪೂತ ಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕಯ್ಗಳಿಂ

ಇವು ಪಳ್ಳಿಗಳಿವು ಪಟ್ಟಣ
ಮಿವು ಕೆಱೆಗಳಿವೆಱಗಿ ನಿಂದ ಮುಗಿಲೋಳಿಗಳಿಂ
ತಿವು ಕಾಡಿವು ಪೆಸರ್ವಡೆದೊ
ಪ್ಪುವ ಬನಮೆಂದಱಿದು ಪೇೞ್ವುದರಿದಾ ನಾಡೊಳ್

ಮಲ್ಲಿಗೆಯಲ್ಲದೆ ಸಂಪಗೆ
ಯಲ್ಲದೆ ದಾಳಿಂಬಮಲ್ಲದೊಪ್ಪುವ ಚೆಂದಂ
ಗಲ್ಲದೆ ಮಾವಲ್ಲದೆ ಕೌಂ
ಗಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್

ಅಡರ್ದೇಱ ಕೋಡಗಂಗಳ್
ಕಡುಪಿಂದೀಡಾಡೆ ಗಟಿಲನೊಡೆದೆಳಗಾಯಿಂ
ದೆಡೆವಿಡದೊಸರ್ವೆಳನೀರ್ಗಳ್
ಮಡುಗೊಂಡೋವುತ್ತುಮಿರ್ಪುವಲ್ಲಿಯ ಬನಮುಂ

ಉಱೆ ಕಾಯ್ವ ಬಿಸಿಲೊಳೆಮ್ಮಂ
ಮಱೆದುಂ ಕೊರಗಿಸದೆ ಪೊರೆದುದೆಂದೊಲವಿಂ ಬಂ
ದೆಱಗುವವೋಲ್ ತೆನೆಯಿಂ ಕಾ
ಲ್ಗೆಱಗುವ ಕಲವೆಗಳವೆಲ್ಲಿಯುಂ ಸೊಗಯಿಸುಗುಂ

ನೆಯ್ದಿಲ್ಗೊಳಂಗಳೆಡೆಯೊಳ್
ಕಾಯ್ದೋವದೆ ಪೋರ್ವ ಪಲವು ನೀರ್ವಕ್ಕಿಗಳಿಂ
ದೆಯ್ದುಣ್ಮುವ ಸೀರ್ಪನಿಯೊಳ್
ತೊಯ್ದೊಯ್ಯನೆ ಗಾಳಿ ಕೂಡೆ ತೀಡುತ್ತಿರ್ಕುಂ

## ವಿರೂಪಾಕ್ಷ: ಚೆನ್ನಬಸವ ಪುರಾಣ

### ಸುಮಾರು ಕ್ರಿ. ಶ. ೧೫೮೪

ಅಲ್ಲಿಗಲ್ಲಿಗೆ ಬೆಳೆದ ಬೆಳೆಗಳಿಂ ಮಳೆಗಳಿಂ
ದಲ್ಲಿಗಲ್ಲಿಗೆ ವನಸ್ಥಳಗಳಿಂ ಕೊಳಗಳಿಂ
ದಲ್ಲಿಗಲ್ಲಿಗೆ ರನ್ನದರೆಗಳಿಂ ಕೆರೆಗಳಿಂ ಪರಿವ ಪರಿಕಾಲ್ಗಳಿಂದೆ
ಅಲ್ಲಿಗಲ್ಲಿಗೆ ತೋರ್ಪ ಗಿರಿಗಳಿಂ ಕರಿಗಳಿಂ
ದಲ್ಲಿಗಲ್ಲಿಗೆ ನೆರೆದ ಶುಕಗಳಿಂ ಪಿಕಗಳಿಂ
ದಲ್ಲಿಗಲ್ಲಿಗೆ ಗವಾಸ್ಪದಗಳಿಂ ನದಗಳಿಂದಾದೇಶವೊಪ್ಪಿರ್ದುದು

ಕಂಜ ಕುಮುದಂಗಳಿಲ್ಲದ ಸರಂ ಸರದಿಂದೆ
ರಂಜಿಸದ ಶುಕಪಿಕಂ ಶುಕಪಿಕಂಗಳ್ಗೆ ಫಲ
ಮಂಜರಿಯನೀಯದಿಹ ಮಾವು ಮಾವುಗಳನಪ್ಪದ ಬಳ್ಳಿ ಬಳ್ಳಿಗಳೊಳು
ಮಂಜುಳ ಧ್ವನಿಗುಡದ ಪರಮೆ ಪರಮೆಗೆ ಸಂತ
ಸಂ ಜನಿಸದರಲರಲ ನವಪರಿಮಳಂಗಳಿಂ
ದಂ ಜಡಿಯದೆಳಗಾಳೆ ಎಳಗಾಳಿಯಿಲ್ಲದಾಬನವಿಲ್ಲವಾನಾಡೊಳು

## ರತ್ನಾಕರ: ಭರತೇಶವೈಭವ

### ಸುಮಾರು ಕ್ರಿ. ಶ. ೧೫೫೭

ಬಳಿಕ ಮೂರನೆಯ ಜಾವದೊಳವನೀಶನು
ನಳಿನಾಕ್ಷಿಯರು ಸಹವಾಗಿ
ನೆಲೆಮಾಡವೇರಿ ಮೇಲ್ಮನೆಯೊಳು ಕುಳಿತು ಪೆಂ
ಗಳಿಗಂಬುನಿಧಿಯ ತೋರಿದನು

ಕಡಲ ಮುನ್ನರಿಯದ ಪೆಂಗಳಚ್ಚರಿವಟ್ಟು
ನಿಡುಬೆರಳಿಟ್ಟು ನಾಸಿಕಕೆ
ಮುಡಿಯೊಲೆದೊಲೆದು ನೋಡಿದರದರೊಂದು ಬ
ಲ್ಗಡಣೆಗೆ ಬಗೆಯೊಳು ಮೆಚ್ಚಿ

ದಿಟ್ಟಿಗೆ ಮಿಗೆ ಹಾಯ್ದು ತೋರ್ಪ ಸಮುದ್ರದ
ಕಟ್ಟಳಲಿಗೆ ಚೋದ್ಯವಟ್ಟು
ಅಟ್ಟಹಾಸವ ಮಾಡುತೊಬ್ಬರೊಬ್ಬರ ಮೈಯ
ತಟ್ಟುತ ತೋರಿ ನುಡಿದರು

ಅಟ್ಟುವ ತೆರೆಯ ಮುಂದೋಡುವ ತೆರೆಯ ಪೆ
ರ್ಬೆಟ್ಟದಂತೇಳ್ವ ತೆರೆಗಳಾ
ತೊಟ್ಟನೆ ಬಯಲಹ ತೆರೆಗಳನವರು ಕ
ಣ್ಣಿಟ್ಟು ನೋಡಿದರರ್ತಿವಡುತ

ಎಡೆಗುತ್ತಿಗಳನಲ್ಲಿಗಲ್ಲಿ ನಿಂದದ್ರಿಯ
ನಿಡುಗಲ್ಲುಗಳನದರೊಳಗೆ
ಎಡೆಯಾಡುತಿಹ ದೋಣಿ ದುಗ್ಗಿ ಕಪ್ಪಲು ದೊಡ್ಡ
ಹಡಗುಗಳಿರವ ನೋಡಿದರು

ತುಂತುರು ತೆರೆ ನೊರೆ ಸುಳಿ ಘುಳುಘುಳು ರವ
ತೂಂತಿಟ್ಟು ಹೊಳೆವ ವಾರಿಧಿಯ
ಕಾಂತೆಯರೆಲ್ಲರೀಕ್ಷಿಸಿದರು. . . . . . . . . . .

## ಸರ್ವಜ್ಞ : ವಚನಗಳು

### ಸುಮಾರು ಕ್ರಿ. ಶ. ೧೭೦೦

ಜೋಳದಾ ಬೋನಕ್ಕೆ ಬೇಳೆಯಾ ತೊಗೆಯಾಗಿ
ಕಾಳೆಮ್ಮೆ ಕರೆದ-ಹೈನಾಗಿ ಬೆಳವಲದ
ಮೇಳ ನೋಡೆಂದ ಸರ್ವಜ್ಞ

ಕಿಚ್ಚುಂಟು ಕೆಸರುಂಟು ಬೆಚ್ಚನಾ ಮನೆಯುಂಟು
ಇಚ್ಛೆಗೆ ಬರುವ-ಸತಿಯುಂಟು ಮಲೆನಾಡ
ಮೆಚ್ಚು ನೋಡೆಂದ ಸರ್ವಜ್ಞ

# ೨. ಕನ್ನಡ-ಸಕ್ಕದ

## ೨ನೆಯ ನಾಗವರ್ಮ : ಕಾವ್ಯಾವಲೋಕನ : ಉದಾಹರಣೆ
## ಸುಮಾರು ಕ್ರಿ. ಶ. ೧೧೪೫

## ಕೇಶಿರಾಜ : ಶಬ್ದಮಣಿದರ್ಪಣ : ಉದಾಹರಣೆ
## ಸುಮಾರು ಕ್ರಿ. ಶ. ೧೨೬೦

ಪಟಿಗನ್ನಡದೆ ಪುದುಂಗೊಳೆ
ಕೊಟಿಸಕ್ಕದಮಂ ತಗುಳ್ಚಿ ಜಾಣ್ ಕಿಡೆ ಮುತ್ತುಂ
ಮೆಟಿಸುಂಗೋದಂತಿರೆ ಪೇ
ಳ್ವಿಟಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ

## ನಯಸೇನ : ಧರ್ಮಾಮೃತ

## ಕ್ರಿ. ಶ. ೧೧೧೨

ಹೊಸಗನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ
ತಿಸಿ ಕೂಡಲಾಱದಕ್ಕಟ
ವಿಸುಕದ ಸಕ್ಕದಮನಿಕ್ಕುವವನುಂ ಕವಿಯೇ

ಸಕ್ಕದಮಂ ಪೇೞ್ವೊಡೆ ನೆಱೆ
ಸಕ್ಕದಮಂ ಪೇೞ್ಗೆ ಶುದ್ಧ ಕನ್ನಡದೊಳ್ ತಂ
ದಿಕ್ಕುವುದೇ ಸಕ್ಕದಮಂ
ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ

## ಆಂಡಯ್ಯ : ಕಬ್ಬಿಗರಕಾವ

ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ
ಬಗೆಗೊಳಿ ಪೇಳಲಾಱರಿನಿತುಂ ಸಲೆ ಮುನ್ನಿನ ಪೆಂಪನಾಳ್ದ ಕ
ಬ್ಬಿಗರದು ಮಾತನಾಡಿದವೊಲಂದವನಾಬ್ದಿರೆ ಬಲ್ಪು ನೆ
ಟ್ಟಗೆ ದೊರೆಕೊಂಡುದಿಂತಿವನೊಳಲ್ಲದೆ ಕೇಳ್ ದೊರೆಕೊಳ್ಳದಾರೊಳಂ

ಎಂದು ತಮತಮಗೆ ಬಲ್ಲವ
ರೆಂದೊಡೆ ನಾನವರ ಬಯಕೆಯಂ ಸಲಿಸುವೆನಿ
ನ್ನೆಂದಚ್ಚ ಕನ್ನಡಂ ಬಿಗಿ
ವೊಂದಿರೆ ಕಬ್ಬಿಗರ ಕಾವನೊಲವಿಂದೊರೆವೆಂ

## ಮುದ್ದಣ: ರಾಮಾಶ್ವಮೇಧ

### ಕ್ರಿ. ಶ. ೧೮೬೯–೧೯೦೧

ಮುದ್ದಣಂ :— . . . ಇದು ಸಕ್ಕದದೊಂದು ಚೆಲ್ವು.

ಮನೋರಮೆ :—ಲೇಸು, ಲೇಸು! ನೀರಿೞಿಯದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು; ಕನ್ನಡದ ಸೊಗಸನಱಿಯಲಾರ್ತೆನಿಲ್ಲೆನಗೆ ಸಕ್ಕದದ ಸೊಗಸಂ ಪೇೞ್ವುದು ಗಡ!

ಮುದ್ದಣಂ :—ಅಪ್ಪೊಡಿನ್ನೆಂತೊ ಒರೆವೆಂ ?

ಮನೋರಮೆ :—ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇೞ್ವುದು. ಕನ್ನಡಂ ಕತ್ತುರಿಯಲ್ತೆ!

ಮುದ್ದಣಂ:—ಅಪ್ಪುದಪ್ಪುದು. ಆದೊಡಂ ಸಕ್ಕದವೊಂದೆ ರನ್ನವಣಿಯಂ ಪೊನ್ನಿಂ ಬಿಗಿದಂತೆಸೆಗುಂ; ಅದಱಿಂ ಕರ್ಮಣಿಸರದೊಳ್ ಚೆಂಬವಳಮಂ ಕೋದಂತಿರೆ, ರಸವೊಸರೆ, ಲಕ್ಕಣಂ ಮಿಕ್ಕಿರೆ, ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ, ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ.

## ಮಹಲಿಂಗರಂಗ: ಅನುಭವಾಮೃತ

### ಸುಮಾರು ಕ್ರಿ. ಶ. ೧೬೭೫

ಸುಲಿದ ಬಾಳೆಯ ಹಣ್ಣಿನಂದದಿ
ಕಳಿದ ಸಿಗುರಿನ ಕಬ್ಬಿನಂದದಿ
ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ
ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ತನ್ನ ಮೋಕ್ಷವ
ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು ?

# ೩. ಕಾವ್ಯದ ತಿರುಳು

## ನೃಪತುಂಗ

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ
ಖೋಪಾತ್ತಮಿದೆಂದಱಿಪುಗು
ಮಾ ಪರಮ ಕವಿಪ್ರಧಾನರಾಕಾವ್ಯಂಗಳ್

## ಪಂಪ

ಪರಮ ಜಿನೇಂದ್ರವಾಣಿಯೆ ಸರಸ್ವತಿ ಬೇಱದು ಪೆಣ್ಣ ರೂಪಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ
ದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ
ರ್ಕೆರೆದಪೆನಾ ಸರಸ್ವತಿಯೆ ಮಾಱ್ಕೆಮುಗಿಲ್ಲಿಯೆ ವಾಗ್ವಿಳಾಸಮಂ

ಇರು ಮರುಳೆ ಶುಷ್ಕ ವೈಯಾ
ಕರಣಂಗಂ ಶುಷ್ಕ ತಾರ್ಕಿಗಂಗಂ ಬೆಳ್ಳ
ಕ್ಕರಿಗಂಗಂ ವಿಷಯಮೆ ಕಾ
ವ್ಯರತ್ನಮತಿಚತುರ ಕವಿಕದಂಬಕ ವಿಷಯಂ

ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗೞ್ತೆ ಲಾಭಮೆಂ
ಬಿವೆ ವಲಮಿಂದ್ರ ಪೂಜೆ ಭುವನಸ್ತುತಮಪ್ಪ ನೆಗೞ್ತೆ ಮುಕ್ತಿ ಸಂ
ಭವಿಸುವ ಲಾಭಮೆಂಬಿವೆ ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ
ರವೆ ಪೆಱರೀವುದೇಂ ಪೆಱರ ಮಾಡುವುದೇಂ ಪೆಱರಿಂದಮಪ್ಪುದೇಂ

ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್
ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊ
ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಱೆಯಿಂ ಬಲ್ದು ತುಂ
ಬಿಗಳಿನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್

## ರನ್ನ

### ಕ್ರಿ. ಶ. ೯೯೩

ಕವಿಮಾರ್ಗದೊಳೊಳಪೊಕ್ಕುಂ
ನವರಸಮಂ ತೆಱೆಯೆ ನುಡಿದನೆನಿಸಿದ ಕವಿ ಸ
ತ್ಕವಿಯೆನಿಕುಂ ಗೂಡಾರದ
ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೇ

ಸರಸತಿಯನಬಲೆಯಂ ಗೋಣ್
ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ
ಕ್ಕರಿಗನೆ ಪಾತಕನಾತನೆ
ಸರಸ್ವತೀದ್ರೋಹನವನನಾರ್ ಮುಟ್ಟುವರೋ

ಪೊಸ ದೇಸೆಯುಂ ಬೆಡಂಗಂ
ರಸಘಟ್ಟಿಯನರ್ಥದೃಷ್ಟಿಯಂ ಬಗೆವರೊ ಭಾ
ವಿಸುವರೊ ಸಾರಣೆಯಂತಿರೆ
ಕಸವಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್

## ನಯಸೇನ

ಮಳೆಯಿಲ್ಲದೆ ಪೊಯ್ ನೀರಿಂ
ಬೆಳಗುಮೆ ಧರೆ ಮಱುಗಿ ಕುದಿದು ಶಾಸ್ತ್ರದ ಬಲದಿಂ
ದಳಿಪಿಂ ಪೇೞ್ದೊಡಮದು ಕೋ
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ

## ನೇಮಿಚಂದ್ರ

### ಸುಮಾರು ಕ್ರಿ. ಶ. ೧೧೭೦

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್
ಮುಟ್ಟಿದರೊತ್ತಿ ಮೆಟ್ಟಿದರದೇನಳವಗ್ಗಳಮೋ ಕವೀಂದ್ರರಾ

ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದಮಕ್ಕುಂ ನೋೞ್ಪಂ
ಬೆಲೆಗೊಟ್ಟು ತಾರ ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ

## ಜನ್ನ

### ಕ್ರಿ. ಶ. ೧೨೦೯-೧೨೩೦

ಎನಿತನೊಱಲ್ದು ಪೇೞ್ವ ಕವಿಯೇವನದಂ ಪೆಸರಿಟ್ಟು ಮೆಚ್ಚ ಬ
ಲ್ಲನನಱಸಲ್ಕೆವೇೞ್ಪುದವನಂ ಜಗದೊಳ್ ಪಡೆಯಲ್ಕೆ ಬಾರದಾ
ತನ ಮುಖದಿಂದಮಲ್ಲದದು ಸಲ್ಲದು ಕಟ್ಟಿಯುಮೇನೊ ಮಾಲೆಗಾ
ಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ

## ಹರಿಹರ

### ಸುಮಾರು ಕ್ರಿ. ಶ. ೧೨೦೦

ಹೞಿಗವಿಗಳ ಕಬ್ಬಂಗಳ
ಹೊಱಗಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ
ಬಱಿ ತಾಱಗ ಬೀಱಗ ವೆ
ತ್ತ್ರಱ ತತ್ತ್ರರವೆಕ್ಕ ಸಕ್ಕಮಸ್ತ್ರವ್ಯಸ್ತ್ರಂ
ಕೇಳಲೊಡಂ ಕಿವಿ ಸವಿಯೊಳ
ಗಾಳದೊಡಂ ತನ್ಮನಂ ಮುಳುಂಗದೊಡಂ ಸೌ
ಖ್ಯಾಲಂಬಿಯೆನಿಪ ಚಿತ್ತಂ
ಲೀಲೆಯೊಳವಗಾಹವಿರದೊಡದು ಸತ್ಕೃತಿಯೇ

## ರಾಘವಾಂಕ

### ಸುಮಾರು ಕ್ರಿ. ಶ. ೧೨೦೦

ನಡೆವರೆಡಹದೆ ಕುಳಿತರೆಡಹುವರೆ ಕಾವ್ಯಮಂ
ನಡಸುವಾತಂ ರಸಾವೇಶ ಮಱಹಾಲಸ್ಯ
ವೆಡೆಗೊಳಲು ತಪ್ಪುಗಲ್ಲದೆ ಕಾವ್ಯಕರ್ತೃ ತಪ್ಪುವನೆ ಒಂದೆರಡೆಡೆಯೊಳು

ಎಡೆವಾಯ್ದು ಬಂದ ತಪ್ಪಂ ಹಿಡಿದು ಸಾಧಿಸದೆ
ಕಡೆತನಕ ಬಂದ ಲೇಸಿಂಗೆ ತಲೆದೂಗೆ ತಲೆ
ಯೊಡೆವುದೇ ಬೇನೆಯಱಿಯದ ನೀರಸರನೇಕೆ ಪುಟ್ಟಿಸಿದನಬ್ಜಭವನು

ರಸ ಜೀವ ಭಾವವೊಡಲರ್ಥವವಯವ ಶಬ್ದ
ವಿರಸವೇ ನುಡಿಯಲಂಕಾರವೇ ತೊಡಿಗೆಯು ತ
ವೆ ಸುಲಕ್ಷಣವೆ ಲಕ್ಷಣ ವಿಮಳ ಪದನ್ಯಾಸ ನಡೆ ರೀತಿ ಸುಕುಮಾರತೆ
ರಸಿಕತನ ಸುಳಿ ಸುಖಂ ಸಳಯವಂತಪ್ಪ ಈ
ಪೊಸ ಕಾವ್ಯಕನ್ನಿಕೆಯ ಪಡೆದು ಪಂಪಾಂಬಿಕೆಯ-
ರಸ ವಿರೂಪಾಕ್ಷಂಗೆ ಕೊಟ್ಟು ಹಂಪೆಯ ರಾಘವಾಂಕನೇಂ ಕೃತಕೃತ್ಯನೋ

## ಚಾಮರಸ

### ಸುಮಾರು ಕ್ರಿ. ಶ. ೧೪೩೦

ದೇಗುಲವೆ ಮಾತಾಡುವಂದದೊ
ಳಾಗಿರದೆ ಒಳಗಿರ್ದು ನುಡಿದಡೆ
ಲೋಗರಿಗೆ ಪ್ರತಿಶಬ್ದದಿಂದಾ ಪರಿಯಲೆನ್ನೊಳಗೆ
ಲಾಗಿನಿಂದಲಿ ಗುರುಗುಹೇಶ್ವರ
ನಾಗಳೆನ್ನನು ನುಡಿಸಿದಡೆ ನುಡಿ
ದಾಗುಮಾಡಿಯೆ ಪೇಳ್ದೆನೀ ಪ್ರಭುಲಿಂಗಲೀಲೆಯನು

ಬಾಯ ನುಡಿಗಳ ಕೇಳಿ ಕಿವಿಯೊಳ
ಗಾಯೆನುತ ಪರಿಣಮಿಸಿ ಹೋಹ ವಿ
ಡಾಯವಲ್ಲಿದು ತಮ್ಮ ತನು ಮನ ಧನವನೆಲ್ಲವನು
ಬೀಯಮಾಡಿಯೆ ಲಿಂಗದಲಿ ನಿಜ
ಕಾಯ ನಿಲುವಡೆ ನಿತ್ಯರಪ್ಪಡೆ
ದಾಯಿಗರು ಲಾಲಿಸುವುದೀ ಪ್ರಭುಲಿಂಗಲೀಲೆಯನು

ಕುಱಿಗಳೋಪಾದಿಯಲಿ ಕಬ್ಬಿನ
ಹೊಱಗಣೆಲೆಯನು ಮೇದಕಟ ಮೆಲು
ಕಿಱಿವುತಲ್ಪಸುಖಕ್ಕೆ ಸೋಲದೆ ಕಬ್ಬಿನೊಳು ರಸವ

ನೆಱೆ ಸವಿವ ಗಜದಂತೆ ಭಕ್ತಿಯ
ತೆಱನ ತಿಳಿದಾಚರಿಸಬೇಕೆಂ
ದಱಿವವರು ಲಾಲಿಸುವುದೀ ಪ್ರಭುಲಿಂಗಲೀಲೆಯನು

## ಸರ್ವಜ್ಞ

ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ
ಬಲ್ಲಿದರು ಇದ್ದು-ಬಲವಿಲ್ಲ ಸಾಹಿತ್ಯ
ವೆಲ್ಲರಿಗಿಲ್ಲ ಸರ್ವಜ್ಞ.

ಹೇಳಿದ್ದೆ ಹೇಳುವರು ಕೇಳಿದ್ದೆ ಕೇಳುವರು
ಕೇಳಿದ್ದೆ ಕೇಳಿ-ಸುಖಿಸುವರು ಹಿರಿಯರ
ಹೇಳಿಕೆಯೆ ಬೇರೆ ಸರ್ವಜ್ಞ.

# ೪. ನಮ್ಮ ಕವಿಗಳ ಹೆಮ್ಮೆ

## ರನ್ನ

ಬೆಳುಗಲಿಯಯ್ನೂಱಱೊಳ
ಗ್ಗಳಮೆನಿಸುವ ಜಂಬುಖಂಡಿಯೆಪ್ಪತ್ತರ್ಕಂ
ತಿಳಕಮೆನೆ ನೆಗಳ್ದ ಮುದುವೊಳ
ಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ

ವಸುಧೆಯೊಳಗೊಂದು ರತ್ನಮಿ
ದೆಸೆದಿರ್ದುದು ಪಲವು ರತ್ನಮಿಲ್ಲೆಂಬಿನಮೇಂ
ಮುಸುಳಿಸಿದನೊ 'ಬಹುರತ್ನಾ
ವಸುಂಧರಾ'ಯೆಂಬ ವಾಕ್ಯಮಂ ಕವಿರತ್ನಂ

ನೆಗಳ್ದ ಕವಿರತ್ನನಂತೊಳ
ಪುಗುವುದು ಮೊಗ್ಗಾಯ್ತು ಜನಮತಾಂಭೋಧಿಯುಮಂ
ಪುಗದಾಗಮಮಱವರ ಬಗೆ
ವುಗದೆ ಕೆಲರ್ ಕವಿಗಳಾಡಿದರ್ ತಡಿದಡಿಯೊಳ್

ಪಡೆಯಡೆಯ ಕಡೆಯ ಬಡವರ್
ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್
ಪಡೆದಂ ಮಹಿಮೋನ್ನತಿಯಂ
ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ

ಆರಾತೀಯ ಕವೀಶ್ವರ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ

ಕನ್ನಡಮೆರಡಱನೂಱಱ
ಕನ್ನಡಮಾ ತಿರುಳ ಕನ್ನಡಂ ಮಧುರಮ್ಯೋ
ತ್ಪನ್ನಂ ಸಂಸ್ಕೃತಮೆನೆ ಸಂ
ಪನ್ನಂ ನೆಗೞ್ದುಭಯಕವಿತೆಯೊಳ್ ಕವಿರನ್ನಂ

ರತ್ನ ಪರೀಕ್ಷಕನಾಂ ಕೃತಿ
ರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾ
ರತ್ನಮುಮಂ ರನ್ನನ ಕೃತಿ
ರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ

## ಷಡಕ್ಷರಿ

### ಕ್ರಿ. ಶ. ೧೬೫೪

ಧರೆಯೊಳ್ ಮೇಣ್ಪುಟ್ಟಿ ಪುಟ್ಟುತ್ತಿರುಳ್ವ ನರರ ಮೇಲುರ್ಬಿ ಕಬ್ಬಂಗಳಂ ಬಿ
ತ್ತರಿಸುತ್ತುಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯ ಲಕ್ಷ್ಮೀ
ವರನಾದಂ ಮತ್ತಮಂಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪರ್

ರಸೆಯೊಳ್ ರಸವತ್ಕವಿತೆಯ
ನುಸಿರಲ್ ಪಡೆದಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸವನಾಂತವೊಲಕ್ಕುಂ

ಅದರಿಂದೆ ಮಹಿತ ಮಹಿಮಾ
ಸ್ಪದನಂ ಶಿವನಂ ತದೀಯ ಶರಣವ್ರಜಮಂ
ಪಡೆದು ಮುದಮೊದವೆ ಬಲ್ಲಂ
ದದೆ ನುತಿಪೆಂ ನುತಿಸೆನುಳಿದ ಸುರರಂ ನರರಂ

ಆರಾರೇರರ್ ಶಾಸ್ತ್ರ
ಶ್ರೀರೋಹಣಗಿರಿಯನಲ್ಲಿ ನವಕವಿತಾ ಚಿಂ
ತಾರತ್ನಂ ದೊರೆಗುಮೆ ಮಾ
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್

## ಕುಮಾರವ್ಯಾಸ

### ಸುಮಾರು ಕ್ರಿ. ಶ. ೧೪೩೦

ಶ್ರೀವನಿತೆಯರಸನೆ ವಿಮಲ ರಾ
ಜೀವಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನನಿಕರ ದಾತಾರ
ರಾವಣಾಸುರಮಥನ ಶ್ರವಣ ಸು
ಧಾವಿನೂತನ ಕಥನ ಕಾರಣ
ಕಾವುದಾನತ ಜನವ ಗದುಗಿನ ವೀರನಾರಾಯಣ

ವೀರನಾರಾಯಣನೆ ಕವಿ ಲಿಪಿ
ಕಾರ ಕುವರವ್ಯಾಸ ಕೇಳುವ
ಸೂರಿಗಳು ಸನಕಾದಿಗಳು ಜಂಗಮಜನಾರ್ದನರು
ಚಾರುಕವಿತೆಯ ಬಳಕೆಯಲ್ಲ ವಿ
ಚಾರಿಸುವೊಡೊಳವಲ್ಲ ಚಿತ್ತವ
ಧಾರು ಹೋ ಸರ್ವಜ್ಞರಾದರು ಸಲುಗೆ ಬಿನ್ನಪವ

ಹಲಗೆ ಬಳಪವ ಹಿಡಿಯದೊಂದ
ಗ್ಗಳಿಕೆ ಪದವಿಟ್ಟಳಿಸದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ
ಬಳಸಿ ಬರೆಯಲು ಕಂಠಪತ್ರದ
ಉಲುಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ

ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ ಯೋಗೀ
ಶ್ವರರ ತತ್ತ್ವವಿಚಾರ ಮಂತ್ರಿಜನಕ್ಕೆ ಬುದ್ಧಿಗುಣ
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ

## ಲಕ್ಷ್ಮೀಶ

### ಸುಮಾರು ಕ್ರಿ. ಶ. ೧೬೦೦

ಶ್ರೀ ವಧುವಿನಂಬಕಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದಕೋರಕಂ ಬಿರಿಯೆ ಜಗ
ತೀವಲಯದಮಲಸೌಭಾಗ್ಯ ರತ್ನಾಕರಂ ಪೆರ್ಚಿನಿಂ ಮೇರೆವರಿಯೆ
ಆವಗಂ ಸರಸ ಕರುಣಾಮೃತದ ಕಳೆಗಳಿಂ
ತೀವಿದೆಳನಗೆಯ ಬೆಳ್ದಿಂಗಳಂ ಪಸರಿಸುವ
ದೇವಪುರ ಲಕ್ಷ್ಮೀರಮಣನಾಸ್ಯಚಂದ್ರನಾನಂದವಂ ನಮಗೀಯಲಿ

ಕೆನೆವಾಲ ಕಡೆದು ನವನೀತಮಂ ತೆಗೆದು ಬಾ
ಯ್ಗಿನಿದಾಗಿ ಸವಿಯುದದರೊಳಗೆ ಪುಳಿವಿಳಿದು ರಸ
ವನೆ ಕಿಡಿಸಿದೊಡೆ ಕರೆದ ಸುರಭಿಗಪ್ಪುದೆ ಕೊರತೆ ಕಾವ್ಯಮಂ ಕೇಳ್ದು ಮಥಿಸಿ
ಜನಿಸಿದ ಪದಾರ್ಥಮಂ ತಿಳಿದು ನೋಡದೆ ವಿನೂ
ತನ ಕವಿತೆಯೆಂದು ಕುಂದಿಟ್ಟು ಜರೆದೊಡೆ ಪೇಳ್ದ
ವನೊಳಾವುದೂಣೆಯಂ ಜಾಣರಿದನರಿದು ಮತ್ಸರವನುಳಿದಾಲಿಸುವುದು

ಜಾಣರಂ ತಲೆದೂಗಿಸದೆ ನುಡಿದೊಡಾ ಪದ
ಕ್ಕೂಣೆಯಂ ಬಹುದೆಂದು ಸರಸೋಕ್ತಿಯಿಂದೆ ಗೀ
ರ್ವಾಣಪುರನಿಲಯ ಲಕ್ಷ್ಮೀವರಂ ತಾನೆ ಸಂಗೀತ ಸುಕಲಾ ನಿಪುಣನು
ವೀಣೆಯಿಂ ಗಾನಮಂ ನುಡಿಸುವಂದದೊಳೆನ್ನ
ವಾಣಿಯಿಂ ಕವಿತೆಯಂ ಪೇಳಿಸಿದನೆಂದರಿದು
ಕೇಣಮಂ ತೊರೆದು ಪುರುಡಿಸುವರಂ ಜರೆದು ಕಿವಿದೆರೆದು ಕೇಳ್ವುದು ಸುಜನರು

ಪುಣ್ಯಮಿದು ಕೃಷ್ಣ ಚರಿತಾಮೃತಂ ಸುಕವೀಂದ್ರ
ಗಣ್ಯಮಿದು ಶೃಂಗಾರ ಕುಸುಮತರು ತುರುಗಿದಾ
ರಣ್ಯಮಿದು ನವರಸ್ಥಪ್ರೌಢಿ ಲಾಲಿತ್ಯ ನಾನಾ ವಿಚಿತ್ರಾರ್ಥಂಗಳ
ಗಣ್ಯಮಿದು ಶಾರದೆಯ ಸಮ್ಮೋಹನಾಂಗ ಲಾ
ವಣ್ಯಮಿದು ಭಾವುಕರ ಕಿವಿದೊಡವಿಗೊದವಿದ ಹಿ
ರಣ್ಯಮಿದು ಭೂತಳದೊಳೆನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ

## ರತ್ನಾಕರ

ಕಬ್ಬಿಗರೋದುಗಬ್ಬವ ಹಾಡುಗಬ್ಬವ
ಕಬ್ಬದೊಳೊರೆವರಿವೆರಡು
ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ
ಕಬ್ಬೆ ಹೇಳೆಲೆ ಸರಸ್ವತಿಯೆ

ಅಯ್ಯಯ್ಯಾ ಚೆನ್ನಾದುದೆನೆ ಕನ್ನಡಿಗರು
ರಯ್ಯಾ ಮಂಚಿದಿಯೆನೆ ತೆಲುಗ
ಅಯ್ಯಯ್ಯ ಎಂಚಪೊರ್ಲಾಂಡೆಂದು ತುಳುವರು
ಮೆಯ್ಯುಬ್ಬಿ ಕೇಳಬೇಕಣ್ಣಾ

ರಳ ಕುಳ ಶಿಥಿಲ ಸಮಾಸ ಮುಂತಾದವ
ರೊಳಗಿಲ್ಲಿ ಕೆಲವುಳ್ಳರುಂಟು
ಕೆಲವಿಲ್ಲಾದರು ಇಲ್ಲವೇಕೆಂದರವರ ಕೋ
ಟಲೆಯೇಕೆ ಹಾಡುಗಬ್ಬದೊಳು

ಸಕಲ ಲಕ್ಷಣವು ವಸ್ತುಕಕೆ ವರ್ಣಕಕಿಷ್ಟು
ವಿಕಳವಾದರು ದೋಷವಿಲ್ಲ
ಸಕಲ ಲಕ್ಷಣಕಾಗಿ ಬಿರುಸುಮಾಡಿದರೆ ಪು
ಸ್ತಕದ ಬದನೆಕಾಯಹುದು

## ೫. ಕನ್ನಡಿಗರುಸಿರು, ಕಣ್ಣು

### ೧. ಪಂಪ : ಜಿನಸ್ತುತಿ

ತ್ರಿದಶೇಂದ್ರಮೌಳಿಮಣಿ ಶೋ
ಣ ದೀಪ್ತಿಗಳ್ ಪುದಿದು ಪೊಳೆವಲಕ್ತಕ ರಸದಿಂ
ಪುದಿದಂತೊಪ್ಪಿರ್ಪರ್ಹ
ತ್ಪದಂಗಳೆಮಗೀಗೆ ತಡೆಯದರ್ಹತ್ಪದಮಂ

ಭುವನೇಶ್ವರ ನಿಜರೂಪ
ಸ್ತವ ವಸ್ತುಸ್ತವ ಗುಣಸ್ತವಂಗಳನವಱಿಂ
ತುವರಂ ಬಣ್ಣಿಸಲಮರೇಂ
ದ್ರ ವಾಸುಕಿ ಪ್ರಭುಗಳಾರ್ತರಿಲ್ಲೆನ್ನಳವೇ

ಅಳತೆಗೆ ತೂಕಕ್ಕೆಣಿಕೆಗೆ
ಒಳಗಾದುವು ಸಕಳವಸ್ತುಗಳ್ ಭುವನಜನ
ಕ್ಕಳೆಯಲ್ ತೂಗಲ್ಕೆಣಿಸ
ಲ್ಕಳುಂಬಮೆನಿಸಿದುವು ನಿನ್ನ ಗುಣಗಣಮರ್ಹಾ

ತನ್ನಿರ್ದೆಡೆಯದೆ ಮೇರುವಿ
ನುನ್ನತಿ ಜಳನಿಧಿಯ ಗುಣ್ಪು ನಭದ ವಿಭುತ್ವಂ
ನಿನ್ನ ಗುಣೋನ್ನತಿ ಸಕಳ ಜ
ಗನ್ನುತ ಭುವನಾಂತರಾಳಮಂ ಪರ್ಬಿರ್ಕುಂ

ಆಕುಳನೆನಾಗಿ ಸುೞಿದೆನ
ನಾಕುಳಮಪ್ಪೆಡೆಯನಱಿಸಿ ಕಾಣೆಂ ಮೂಱುಂ
ಲೋಕದೊಳಂ ನಿನ್ನಿರ್ಕೆ [ಯ]
ಲೋಕಾಗ್ರಮೆ ಸಂತಮದನೆ ಮಾಡೆನಗರ್ಹಾ

ಭವನಿಗಳದ ತೊಡರಂ ಕಳೆ
ಭವಜಳಧಿಯ ತಡಿಗೆ ಸಾರ್ಚು ಭವಗಹನದುಪ
ದ್ರವಮಂ ಕಿಡಿಸು ಭವಾಂತಕ
ಭವಸಕ್ಕುಯ್ ತಡೆಯದೆನ್ನನಿನ್ ಭವಮಥನಾ

ಮರಣದ ಜನ್ಮದ ನಿಗಳಂ
ನಿರಾಕುಳಂ ಪತ್ತುವಿಡುವಿನಂ ಜಿನ ನಿನ್ನಂ
ಸ್ಮರಿಯಿಪುದನಣ್ಣೋರಣ್ಪಂ
ತರವ್ಯತಿಕ್ರಮಣ ಮಾತ್ರಮಂ ಮಱಿದಪೆನೇ

ತಿಳಕಂ ವಶ್ಯಮೆ ಜಡಜನ
ಮೊಳಗಱಿಯದು ಸಕಳ ಭವ್ಯತಿಳಕಂಗೆ ಜಗ
ತ್ತಿಳಕ ಭವತ್ಪದ ಚಂದನ
ತಿಳಕಂ ತ್ರೈಲೋಕ್ಯವಶ್ಯಮಕ್ಕುಮವಶ್ಯಂ

ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂ
ದ್ರ ಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಟ್ಪಂತು ಬೆಳ್ಳಲ್ಲೆನು
ತ್ತಮ ದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾ
ಭಮಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀ ಮನೋವಲ್ಲಭಾ

## ೨. ನಾಗಚಂದ್ರ

### ಸುಮಾರು ಕ್ರಿ.ಶ. ೧೧೧೦ : ಜಿನಸ್ತುತಿ

ಜಯ ಜಿತವೃಜಿನ ಜಿನೇಶ್ವರ
ದಯಾನದೀ ಪುಳಿನ ರಾಜಹಂಸ ಭವಾಂಭೋ
ಧಿಯ ತಡಿಯನೆಯ್ದಿಸೆಮ್ಮಂ
ನಯ ನಿಕ್ಷೇಪ ಪ್ರಮಾಣ ಪಾತ್ರದಿನರುಹಾ

ನೇವಾಳಮೆಂದು ಕೆಲಬರ್
ಪಾವಂ ಪಿಡಿವಂತೆ ದೇವ ನೀನಲ್ಲದರಂ
ದೇವರಿವರೆಂದು ಪಿಡಿದಿ
ನ್ನೇವಿಧಿವಟ್ಟಪರೊ ಮೋಹಮೂರ್ಛೆಯಿನರುಹಾ

ನಿನಗೆ ರಸಮೊಂದೆ ಶಾಂತಮೆ
ಜಿನೇಂದ್ರ ಮನಮಾ ರಸಾಂಬುನಿಧಿಯೊಳಗವಗಾ
ಹನಮಿರ್ದು ಮಿಕ್ಕ ರಸಮಂ
ಕನಸಿನೊಳಂ ನೆನೆಯದಂತು ಮಾಡೆಮಗರುಹಾ

ಮಣಿಭೂಷಣ ಭರದಿಂ ತನು
ಕಿಣಮುಪ್ಪುದದೇಕೆ ನಿನ್ನ ನಿರ್ಮಲ ಗುಣ ಭೂ
ಷಣಮುಂ ದಯೆಗೆಯ್ ಪಡೆವೆಂ
ಪ್ರಣಯಮುನಪವರ್ಗ ಲಕ್ಷ್ಮಿಗ್ರಗಡಱಿಂದರುಹಾ

ಸಿಂಗದ ಮಾರ್ದನಿ ಮದನಾ
ತಂಗಮುನಳಱಿಸುವವೊಲ್ ಸಿಜಪ್ರತಿಬಿಂಬಂ
ಪಿಂಗದೆ ಮನದೊಳ್ ನಿಂದಿರೆ
ಪಿಂಗಿಸುವುದು ಜನನ ಮರಣ ದುಃಖಮುನರುಹಾ

ಮೆಚ್ಚಿ ಗಡ ಮುಳಿಯೆ ಗಡ ಬಗೆ
ಬೆಚ್ಚಿರೆ ಬೇಱಾಗೆ ನಿನ್ನ ಪದದೊಳ್ ಮನುಜಂ
ಉಚ್ಚಗತಿ ನೀಚಗತಿವಡೆ
ವಚ್ಚರಿ ಕಣ್ದೆಱೆವ ತೆಱನನಱಿಪೆಮುಗರುಹಾ

ಜ್ಞಾಯಂಗೆ ನೀನೇ ವಲಮಾ
ದೇಯಂ ನೀನಲ್ಲದನ್ಯವಸ್ತುಗಳೆಲ್ಲಂ
ಹೇಯಂಗಳೆಂಬೆ ತತ್ತ್ವೋ
ಪಾಯಮುನೆಮಗೀವುದೇವೆವುಳಿದುವನರುಹಾ

ನಿತ್ಯಸುಖಮಾತ್ಮರೂಪಮ
ನಿತ್ಯಸುಖಂ ಮೋಹರೂಪಮೆಂಬ ವಿವೇಕಂ
ಸತ್ಯಸ್ವರೂಪಮುದಱಿೊಳ
ಗತ್ಯಂತಾನುಭವ ವಿಭವಮಕ್ಕೆಮುಗರುಹಾ

## ೩. ಬೊಪ್ಪಣ್ಣ : ಗೊಮ್ಮಟನ ಸ್ತುತಿ

### ಸುಮಾರು ಕ್ರಿ. ಶ. ೧೧೮೦

ಶ್ರೀ ಗೊಮ್ಮಟ ಜಿನನಂ ನರ
ನಾಗಾಮರ ದಿತಿಜ ಖಚರಪತಿ ಪೂಜಿತನಂ
ಯೋಗಾಗ್ನಿಹತಸ್ಮರನಂ
ಯೋಗಿಧ್ಯೇಯನನಮೇಯನಂ ಸ್ತುತಿಯಿಸುವೆಂ

ಕ್ರಮದಿಂ ಮೆಯ್ವೊಣರ್ದಾಜಿದಕ್ರಮದೆ ಮಾತಂ ಬಿಟ್ಟು ತನ್ನಿಟ್ಟ ಚ
ಕ್ರಮದುಂ ನಿಃಪ್ರಭಮಾಗೆ ಸಿಗ್ಗನೊಳಕೊಂಡಾತ್ಮಾಗ್ರಜಂಗೊಳ್ಪಗೆ
ಯ್ದು ಮಹೀರಾಜ್ಯಮನಿತ್ತು ಪೋಗಿ ತಪದಿಂ ಕರ್ಮಾರಿವಿಧ್ವಂಸಿಯಾ
ದ ಮಹಾತ್ಮಂ ಪುರಸೂನು ಬಾಹುಬಲಿವೊಲ್ ಮತ್ತಾರೊ ಮಾನೋನ್ನತರ್

ಶ್ರುತಮುಂ ದರ್ಶನಶುದ್ಧಿಯುಂ ವಿಭವಮುಂ ಸದ್ವೃತ್ತಮುಂ ದಾನಮುಂ
ಧೃತಿಯುಂ ತನ್ನೊಳಿ ಸಂದ ಗಂಗಕುಳಚಂದ್ರಂ ರಾಚಮಲ್ಲಂ ಜಗ
ನ್ನುತನಾ ಭೂಮಿಪನದ್ವಿತೀಯವಿಭವಂ ಚಾಮುಂಡರಾಯಂ ಮನು
ಪ್ರತಿಮಂ ಗೊಮ್ಮಟನಲ್ತೆ ಮಾಡಿಸಿದನಿಂತೀ ದೇವನಂ ಯತ್ನದಿಂ

ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯಮೌನ್ನತ್ಯಮುಂ
ನುತಸೌಂದರ್ಯಮುಮಾಗೆ ಮತ್ತತಿಶಯಂ ತಾನಾಗದೌನ್ನತ್ಯಮುಂ
ನುತಸೌಂದರ್ಯಮುಮೂರ್ಜಿತಾತಿಶಯಮುಂ ತನ್ನಲ್ಲಿ ನಿಂದಿರ್ದುವೇಂ
ಕ್ಷಿತಿಸಂಪೂಜ್ಯಮೊ ಗೊಮ್ಮಟೇಶ್ವರ ಜಿನ ಶ್ರೀರೂಪಮಾತ್ಮೋಪಮಂ

ಅನುಪಮರೂಪನೇ ಸ್ಮರನುದಗ್ರನೇ ನಿರ್ಜಿತಚಕ್ರಿ ಮತ್ತುದಾ
ರನೆ ನೆಱೆ ಗೆಲ್ದುಮಿತ್ತನಖಿಳೋರ್ವಿಯನತ್ಯಭಿಮಾನಿಯೇ ತಪಃ
ಸ್ಥನುಮೆರಡಂಘ್ರಿಯಿತ್ತೆಳೆಯೊಳಿರ್ದಪುದೆಂಬನನೂನಬೋಧನೇ
ವಿನಿಹತ ಕರ್ಮಬಂಧನನೆ ಬಾಹುಬಲೀಶನಿದೇನುದಾತ್ತನೋ

ಅಭಿಮಾನ ಸ್ಥಿರಭಾವಮುಂ ನಮಗೆ ಮಾಟ್ಕಿತ್ಯುದ್ಧಮಾನೋನ್ನತಂ
ಶುಭ ಸೌಭಾಗ್ಯಮನಂಗಜಂ ಭುಜಬಳಾವಷ್ಟಂಭಮುಂ ಚಕ್ರವ
ರ್ತಿಭುಜಾದರ್ಪವಿಳೋಪಿ ಬಾಹುಬಲಿ ತೃಷ್ಣಾಚ್ಛೇದಮುಂ ಮುಕ್ತರಾ
ಜ್ಯಭರಂ ಮುಕ್ತಿಯನಾಪ್ತ ನಿರ್ವೃತಿಪದಂ ಶ್ರೀ ಗೊಮ್ಮಟೇಶಂ ಜಿನಂ

ಕೆಮ್ಮಗಿದೇಕೆ ನಾಡ ಪಲವಂದದ ನಂದಿದ ಬಿಂದಿಗರ್ಕಳಂ
ನೀಂ ಮರುಳಾಗಿ ದೇವರಿವರೆಂದವರಂ ಮತಿಗೆಟ್ಟು ನಿನ್ನನೇ
ಕಮ್ಮ ತೊಳಲ್ಚಿದಪ್ಪೆ ಭವಕಾನನದೊಳ್ ಪರಮಾತ್ಮರೂಪನಂ
ಗೊಮ್ಮಟದೇವನಂ ನೆನೆಯ ನೀಗುವೆ ಜಾತಿ ಜರಾದಿ ದುಃಖಮಂ

ಸಮ್ಮದವಾಗಲಾಗ ಕೊಲೆಯುಂ ಪುಸಿಯುಂ ಕಳವುಂ ಪರಾಂಗನಾ
ಸಮ್ಮತಿಯುಂ ಪರಿಗ್ರಹದ ಕಾಂಕ್ಷೆಯುಮೆಂಬಿವಱಿಂದಮಾದೊಡೆಂ
ದುಂ ಮನುಜಂಗಿಹತ್ರೆಯು ಪರತ್ರೆಯ ಕೇಡೆನುತಂ ಮಹೋಚ್ಚದೊಳ್
ಗೊಮ್ಮಟದೇವನಿರ್ದು ಸಲೆ ಸಾಱುವವೋಲೆಸೆದಿರ್ದನೀಕ್ಷಿಸೈ

ಕಮ್ಮಿದುವಪ್ಪ ಕಾಡ ಪೊಸವೂಗಳಿನರ್ಚಿಸಿ ಪಾದಪದ್ಮಮಂ
ಸಮ್ಮದದಿಂದೆ ನೋಡಿ ಭವದಾಕೃತಿಯಂ ಬಲಗೊಂಡು ಬಲ್ಲ ಪಾಂ
ಗಿಂ ಮನವೊಲ್ದು ಕೀರ್ತಿಪವರೇಂ ಕೃತಕೃತ್ಯರೊ ಶಕ್ರನಂದದಿಂ
ಗೊಮ್ಮಟದೇವ ನಿನ್ನನಱಿದರ್ಚಿಸುತಿರ್ಪವರೇಂ ಕೃತಾರ್ಥರೋ

ಮನದಿಂ ನುಡಿಯಿಂ ತನುವಿಂ
ದೆನಸುಂ ಮುನ್ನೆರಪಿದಘಮನಲಱಿಪೆನೆಂಬೀ
ಮನದಿಂದಮೊಸೆದು ಗೊಮ್ಮಟ
ಜಿನನಂ ಸ್ತುತಿಯಿಸಿದನಿಂತು ಸುಜನೋತ್ತಂಸಂ

ಪೊಡವಿಗೆ ಸಂದ ಗೊಮ್ಮಟ ಜಿನೇಂದ್ರ ಗುಣಸ್ತವ ಶಾಸನಕ್ಕೆ ಕ
ನ್ನಡಗವಿ ಬಪ್ಪನೆಂದೆನಿಪ ಬೊಪ್ಪಣಪಂಡಿತನೊಲ್ದು ಪೇೞ್ದಿವಂ
ಕಡೆಯಿಸಿದಂ ಬಲಂ ಕವಡಮಯ್ಯನ ದೇವಣೞ್ತಿಯಿಂದೆ ಚಾ
ಗಡೆಗೆಯ ರುದ್ರನಾದರದೆ ಮಾಡಿಸಿದಂ ವಿಳಸತ್ ಪ್ರತಿಷ್ಠೆಯಂ

## ೪. ರನ್ನ : ವೈರಾಗ್ಯ

ತನಗಲ್ಲದೊಡಲ್ಗೊಡಮೆ
ಮನಮಿಟ್ಟಪವರ್ಗಮಾರ್ಗಮಂ ಪೊರ್ದದೆ ತ
ನ್ನನೆ ತಾನೆ ನಂಬಿಸುವೊಡಾ
ತ್ಮನಂತು ಪೇೞಾತ್ಮವಂಚಕರ್ ಪೆಱರೊಳರೇ ?

ಸಾರದೆ ಸಾರಮಪ್ಪ ಜಿನಧರ್ಮಮನಾತ್ಮನಸಾರಮಪ್ಪುದಂ
ಸಾರಮಿದೆಂದು ನಂಬಿ ತನಗಲ್ಲದುದಂ ತನಗಪ್ಪುದೆಂದು ಕೇ
ದಾರ ವಿಹಾರ ಸೋದರ ಕೃಶೋದರ ಸುಂದರ ದಾರ ದಾರಕೋ
ದಾರ ವಿಮೋಹದೊಳ್ ತೊಡರ್ದು ದಾರುಣ ದುಃಖಮನೆಯ್ದದಿರ್ಕುಮೇ ?

ಮುನಿದುಯ್ವ ಜವಂಗಂ ಮಾ
ಯೆನಲಣ್ಮುವರಿಲ್ಲ ಬಗೆಯ ನಿನಗಿನ್ನಾರ್ಮುಂ
ಜಿನಧರ್ಮವೊಂದೆ ಜೀವನೆ
ನೆನೆ ಗಡ ಲೋಕತ್ರಯಕ್ಕೆ ದಿನಸಂ ಜಿನನಂ !

ಮತಿಗೆಟ್ಟು ಜೀವ ಧರ್ಮಾ
ಮೃತಮಂ ಸೇವಿಸದಧರ್ಮಮಂ ಸೇವಿಸಿ ದು
ರ್ಗತಿಗಿೞಿದೀ ಜವನೆಂಬ ಱ
ಸಿ ತಿಂಬ ದೈವಕ್ಕೆ ಪೋಗಿ ಪಾೞಿಂ ಬಿಡುವಯ್ !

ಎನಿತೆನಿತು ಕೞಿದ ಭವಮಂ
ನೆನೆದಪೆ ! ಎನಿತೆನಿತು ಭವದ ಬಂಧುಗಳಂ ನೀಂ
ನೆನೆದಪೆ ! ಎನಿತೆನಿತೊಡಲಂ
ನೆನೆದಪೆ ! ಎಲೆ ಜೀವ ನೀನೆ ಪೇೞ್ ಪವಣೊಳವೇ ?

ಎನಿತಂ ಕುಕ್ಷಿದಿಗುದಿದಪೆ ?
ಎನಿತಂ ಕಕ್ಕುೞಿಗಲಲ್ದಪಯ್ ? ಜೀವನೆ ನೀ
ನೆನಿತಂ ಮಲ್ಮಲ ಮಱುಗುವೆ ?
ಎನಿತಂ ಸಂಸಾರದೊಳಗೆ ತಿಱ್ರನೆ ತಿರಿವಯ್ ?

ಕಡೆಯಿಲ್ಲದ ಸಂಸಾರದ
ಕಡೆಗಾಣಲ್ ಬಗೆವೆಯಪ್ಪೊಡೆನ್ನುಕ್ತಿಗೊಡಂ
ಬಡು ಜೀವನ ನಿನ್ನ ಕಾಲಂ
ಪಿಡಿವೆಂ ಧರ್ಮಮನೆ ಮಗುೞೆ ಬಲ್ಪಿಡಿವಿಡಿಯಾ

ಜನನ ಮೃತಿ ದೇವ ನಾರಕ
ಮನುಷ್ಯ ತಿರ್ಯಗ್ವಿಕಲ್ಪಗತಿಗಳೊಳೆನಸುಂ
ನಿನಗೆ ಸುಖಮಿಲ್ಲ ನೆಟ್ಟನೆ
ಮನದೊಳ್ ಭಾವಿಪೊಡಸಾರಮೀ ಸಂಸಾರಂ

ಈ ನಾರಕ ತಿರ್ಯಗ್ಗತಿ
ಗೀ ನರ ಸುರ ಗತಿಗೆ ಪೇಸಿದೆಂ ದರ್ಶನದಿಂ
ಜ್ಞಾನದಿನೊಪ್ಪುವ ಪರಮ
ಸ್ಥಾನಮನಾಂ ಪಡೆವೆನಕ್ಕೆ ಪಂಚಮಗತಿಯುಂ

ಶಿಷ್ಟಜನಾಶ್ಲಿಷ್ಟಂ ಬಹು
ಕಷ್ಟಂ ಬಹು ದುಷ್ಟಮುಷ್ಟಕರ್ಮಾಗ್ನಿಪರಿ
ಪ್ಲುಷ್ಟಂ ಹಾ ಹಾ ಧಿಕ್ ಛೀಃ
ಕಷ್ಟಮವಶ್ಯಂ ನಿಕೃಷ್ಟ ಮೀಸಂಸಾರಂ

ದಿವಸ ದಿವಸಂಗಳಿಂ ಕುಂ
ದುವುವಲ್ಲದೆ ಬಳೆಯುವಾಯುವುಂ ವಪುವುಂ ಪೆ
ರ್ಚುವುವಲ್ಲವು ವಿಷಯಸುಖ
ಕ್ಕವಚತ್ತಿಂ ಪಡೆದುಕೊಳ್ವೆನಕ್ಷಯಸುಖಮಂ

ಅಂಗಜನ ಸುಖದ ಸಾಮ್ರಾ
ಜ್ಯಂಗಳ್ ಶಾರೀರ ಮಾನಸಾಗಂತುಕ ದುಃ
ಖಂಗಳನೆ ಮಾಳ್ಪುವದಱಿಂ
ಪಿಂಗುವೆನಿನ್ನೆನಗೆ ಜಿನನ ಚರಣಂ ಶರಣಂ

## ೫. ರತ್ನಾಕರ : ಆತ್ಮ-ಕರ್ಮ-ಮುಕ್ತಿ

ಮುಕ್ತರಾದವರೆಲ್ಲ ಮುನ್ನ ಸಂಸಾರ ಸಂ
ಯುಕ್ತರಾಗಿರ್ದು ಕರ್ಮಗಳ
ಯುಕ್ತಿಯರಿದು ಶಕ್ತಿಗೆಡಿಸಿ ದೇಹವ ಬಿಟ್ಟು
ಮುಕ್ತಿಗೈದಿದರೆಲೆ ಭವ್ಯಾ

ಸುಖಕುಬ್ಬಿ ದುಃಖಕೆ ಮರುಗಿದರೊಡನೆ ಮುಂ
ದಖಿಳ ಕರ್ಮಗಳು ಕಟ್ಟುವುವು
ಸುಖದುಃಖಕತ್ತಿತ್ತಲಾಗದೆ ಧ್ಯಾನಾಭಿ
ಮುಖದೊಳಿದ್ದರೆ ಬಂಧವಿಲ್ಲ

ಕರ್ಮವ ಸುಡವ ಸಾಮರ್ಥ್ಯವುಂಟಾತ್ಮಗೆ
ಕರ್ಮದೊಳಡಗಿರುತಿಹನು
ಕರ್ಮವರಿದು ತಾನು ತನ್ನ ನೋಡಿದರೆಂಟು
ಕರ್ಮವ ಸುಟ್ಟುರುಹುವನು

ಧ್ಯಾನದಿಂದಲ್ಲದೆ ಕರ್ಮ ನಿರ್ಜರಿಸದಾ
ಧ್ಯಾನ ತಾನೆಂತುಟೆಂದೆನಲು
ನಾನಾಚಿಂತೆಯಳಿದು ಮನವಾತ್ಮಸಂ
ದಾನದೊಳಿರಲದೆ ಧ್ಯಾನ

ಈ ಕಾಲವಾಕಾಲವೆನಬೇಡ ನಿಶ್ಚಯ
ದೇಕಧರ್ಮವ ಮಾಡಿದವರು
ಲೌಕಾಂತಿಕ ದಕ್ಷಿಣೇಂದ್ರರೆನಿಸಿ ಪುನ
ರೇಕ ಜನ್ಮಕೆ ಮುಕ್ತರಹರು

ನೋಡಿ ನೋಡದ ನುಡಿದಾಡಿ ನುಡಿಯದೆಡೆ
ಯಾಡಿ ನಡೆಯದ ಮಹಾತ್ಮಾ
ಕೂಡೆ ಕೂಡೆನಗೆ ಚಿತ್ಕಳೆಯ ಬೆಳಕನುಂಟು
ಮಾಡು ನಿರಂಜನ ಸಿದ್ಧಾ

ನಿಂದಲ್ಲಿ ನಡೆದಲ್ಲಿ ಕುಳಿತಲ್ಲಿ ಸರ್ವತ್ರ
ಕುಂದದೆ ಕುಶಲ ಲೀಲೆಯೊಳು
ಸಂಧಿಸುವಭವ ನನ್ನೆದೆಯೊಳಗಿರು ಚಿದಾ
ನಂದ ಚಿದಂಬರ ಪುರುಷಾ

ತಿಳಿವೆಳಗಿನ ತೀರ್ಥರೂಪವೆ ತಿಂಗಳ
ಬೆಳಗಿನೊಳಾದ ಪುತ್ತಳಿಯೆ
ತಳುಮಾಡದೆನಗೆ ಸನ್ಮತಿದೋರು ಸುಜ್ಞಾನ
ನಿಳಯ ನಿರಂಜನ ಸಿದ್ಧಾ

ಹಿಂದು ಮುಂದೆಡಬಲ ಹೊರಗೊಳಗಡಿ ಕಡೆ
ಯೆಂದೆನ್ನದಮೃತ ಸ್ವರೂಪಾ
ಎಂದೆಂದು ಎನ್ನ ಚಿತ್ತದೊಳಿರು ಸಚ್ಚಿದಾ
ನಂದ ಚಿದಂಬರ ಪುರುಷಾ

ಉಸುರೆಂಬ ಕರಗಸದಿಂದ ದೇಹಾತ್ಮರ
ಬೆಸುಗೆಯ ಬಿಡಿಸಿ ನೋಡಿದರೆ
ಮಸುಳದೆ ತೋರ್ಪ ಮಹಾತ್ಮ ನೀನೆನಗೊಳ್ಪ
ನೆಸಗು ನಿರಂಜನ ಸಿದ್ಧಾ

ತೆರೆಯ ಮೇಲ್ ತೆರೆಗಳ ತೋರುವಿಂಗಡಲಂತೆ
ಸಿರಿಯ ಮೇಲ್ ಸಿರಿಯ ಸೂಚಿಸುವ
ಚರಿತಾರ್ಥ ನನ್ನಂತರಂಗದೊಳಿರು ಮನೋ
ಹರನೆ ಚಿದಂಬರ ಪುರುಷಾ

ಕಾಣದರ್ಥವ ಕಾಣಿಸುವ ಪರಂಜ್ಯೋತಿ ನೀ
ಮಾಣದೆ ನನ್ನೆದೆಯೆಂಬ
ಕೋಣೆಯೊಳಿರು ಹೋದೆಯಾದರೆ ನಿನಗೆ ನಿ
ನ್ನಾಣೆ ಚಿದಂಬರ ಪುರುಷಾ

## ೬. ಬಸವಣ್ಣ : ಧರ್ಮದ ಕೆಚ್ಚು
## (ಸುಮಾರು ಕ್ರಿ. ಶ. ೧೧೬೦)

ದೇವನೊಬ್ಬ, ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದೊಡೆ ಕಿವಿ ಮೂಗ ಕೊಯ್ಯುವನು. ಹಲವು ದೈವದ ಎಂಜಲ ತಿಂಬವರನೇನೆಂಬೆನಯ್ಯ ಕೂಡಲ ಸಂಗಮದೇವ!

ನಂಬಿ ಕರೆದಡೆ ಓ ಎಂಬ ಶಿವನು. ನಂಬದೆ ಕರೆದೆಡೆ ಓ ಎಂಬನೆ ಶಿವನು? ನಂಬಲರಿಯರು, ನಚ್ಚಲರಿಯರು, ಡಂಬಿನ ಭಕ್ತರು. ನಂಬದೆ ನಚ್ಚದೆ ಬರಿದೆ ಕರೆದಡೆ, ಶಂಭು ಮೌನದಲಿಪ್ಪ ಕೂಡಲಸಂಗಮದೇವ.

ಮಡಕೆಯೇ ದೈವವು, ಮರದಲ್ಲಿಯೆ ದೈವವು, ಬಿಲ್ಲ ನಾರಿ ದೈವವು ಕಾಣಿರಯ್ಯ. ಕೊಳಗನೇ ದೈವವು, ಗಿಣಿಲು ದೈವವು ಕಾಣಿರಯ್ಯ. ದೈವ ದೈವವೆಂದು ಕಾಲಿಡಲಿಂಬಿಲ್ಲ. ದೇವನೊಬ್ಬನೇ, ನಮ್ಮ ಕೂಡಲ ಸಂಗಮದೇವ.

ಅರ್ಥವಡಗದು, ಕ್ರೋಧತೊಲಗದು. ಕ್ರೂರ ಕುಹಕ ಕುಭಾಷೆ ಬಿಡದನ್ನಕ್ಕ, ನೀನೆತ್ತ ಶಿವನೆತ್ತ, ಹೋಗತ್ತ ಮರುಳೇ. ಭವರೋಗವೆಂಬ ತಿಮಿರ ತಿಳಿಯದನ್ನಕ ಕೂಡಲಸಂಗಯ್ಯನೆತ್ತ, ನೀನೆತ್ತ ಮರುಳೇ!

ಹೊತ್ತಾರೆ ಎದ್ದು, ಅಗ್ಗವಣಿ ಪತ್ರೆಯ ತಂದು ಹೊತ್ತುಹೋಗದ ಮುನ್ನ ಪೂಜಿಸು ಲಿಂಗವ. ಹೊತ್ತುಹೋದ ಬಳಿಕ ನಿನ್ನನಾರು ಬಲ್ಲರು? ಹೊತ್ತು ಹೋಗದ ಮುನ್ನ, ಮೃತ್ಯು ಒಯ್ಯದ ಮುನ್ನ, ತೊತ್ತುಗೆಲಸವ ಮಾಡು ಕೂಡಲ ಸಂಗಮದೇವನ.

ಹೊತ್ತಾರೆ ಎದ್ದು, ಕಣ್ಣಹೊಸೆವುತ್ತ, ಎನ್ನ ಒಡಲಿಂಗೆ ಎನ್ನ ಒಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ, ಎನ್ನ ಮನಕ್ಕೆ ಮನವೇ ಸಾಕ್ಷಿ. 'ಅಶನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ ಸಂಚರಂತಿ ಮಹಾ ಘೋರೇ ನರಕೇ ಕಾಲಮಕ್ಷಯಂ" ಎಂಬ ಶ್ರುತಿಯ ಬಸವಣ್ಣನೋದುವನು. ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯ ಪ್ರಮಥರು. ಕೊಡುವೆನುತ್ತರವನವರಿಗೆ, ಕೊ ಡ ಲ ಮ್ಮೆ. ಹೊಲೆಹೊಲೆಯರ

ಮನೆಯ ಹೊಕ್ಕಾದರೆಯೂ, ಸಲೆ ಕೈಕೂಲಿಯು, ಮಾಡಿಯಾದರೆಯೂ, ನಿಮ್ಮ
ನಿಲವಿಂಗೆ ಕುದಿವೆನಲ್ಲದೆ, ಎನ್ನ ಒಡಲವಸರಕ್ಕೆ ಕುದಿದೆನಾದರೆ, ತಲೆದಂಡ
ಕೂಡಲಸಂಗಮದೇವ.

ಹುತ್ತವ ಬಡಿದಡೆ, ಹಾವು ಸಾಯಬಲ್ಲುದೇ ಅಯ್ಯ ? ಘೋರ ತಪವ
ಮಾಡಿದಡೇನು ? ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯ
ಕೂಡಲಸಂಗಮದೇವ ?

ಒಲೆಯ ಬೂದಿಯ ಬಳಿಯಲು ಬೇಡ. ಒಲೆಯಂತೆ ಹೂಸಿಕೊಂಡಿಪ್ಪುದು
ಹುಸಿ. ಏನು ಫಲ, ಮನದಲ್ಲಿ ಲೇಸಿಲ್ಲದನ್ನಕ್ಕ ? ಒಂದನಾಡ ಹೋಗಿ ಒಂಬತ್ತ
ನಾಡುವ ಡಂಬಕರ ಮೆಚ್ಚ ಕೂಡಲಸಂಗಮದೇವ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ,
ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ. ಇದೇ
ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ. ಇದೇ ನಮ್ಮ ಕೂಡಲಸಂಗಮದೇವನ
ನೊಲಿಸುವ ಪರಿ.

ಎನ್ನವರೊಲಿದು ಹೊನ್ನಶೂಲದಲಿಕ್ಕಿದರು, ಎನ್ನ ಹೊಗಳಿ ಹೊಗಳಿ. ಎನ್ನ
ಹೊಗಳ್ತೆ ಎನ್ನ ಮೈಗೊಂಡಿತಲ್ಲಾ ! ಅಯ್ಯಾ, ನಿಮ್ಮ ಮನ್ನಣೆಯೇ ಮಸೆದಲಗಾಗಿ
ತಾಗಿತ್ತಲ್ಲಾ ! ಅಯ್ಯಾ, ನೊಂದೆನು, ಸೈರಿಸಲಾರೆನು. ಕೂಡಲಸಂಗಮದೇವ,
ನೀನೆನಗೊಳ್ಳಿದನಾದರೆ, ಎನ್ನ ಹೊಗಳತೆಗಡ್ಡಬಾರಾ, ಧರ್ಮಿ.

ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದಸಾಕ್ಷಿ,
ಎನ್ನ ಮನ ಸಾಕ್ಷಿ. ಕೂಡಲಸಂಗಮದೇವಾ ಎನಗಿದೇ ದಿಬ್ಯ.

ಕಪ್ಪೆ ಸರ್ಪನ ನೆಳಲಲ್ಲಿ ಇಪ್ಪಂತೆ ಎನಗಾಯಿತ್ತಯ್ಯಾ. ಅಕಟಕಟ. ಸಂಸಾರ
ವೃಥಾ ಹೋಯಿತ್ತಲ್ಲಾ ! ಕರ್ತೃ ಕೂಡಲಸಂಗಮದೇವಾ, ಇವ ತಪ್ಪಿಸಿ ಎನ್ನನು
ರಕ್ಷಿಸಯ್ಯಾ.

ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯಾ. ವಿಚಾರಿಸಿದರೆ ಏನೂ ಹುರುಳಿಲ್ಲ
ವಯ್ಯಾ. ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಪುಮಾಡಿ, ನೀವಿರಿಸಿದರಯ್ಯಾ
ಕೂಡಲ ಸಂಗಮದೇವ.

ನಾನೊಂದ ನೆನೆದರೆ ತಾನೊಂದ ನೆನೆವುದು. ನಾನಿತ್ತಲೆಳೆದರೆ ತಾನತ್ತಲೆಳೆ
ವುದು. ತಾ ಬೇರೆ ಎನ್ನನಳಲಿಸಿ ಕಾಡಿತ್ತು. ತಾ ಬೇರೆ ಎನ್ನ ಬಳಲಿಸಿ ಕಾಡಿತ್ತು.
ಕೂಡಲಸಂಗನ ಕೂಡಿಹೆನೆಂದರೆ ತಾನೆನ್ನ ಮುಂದುಗೆಡಿಸಿತ್ತು ಮಾಯೆ.

ಶೂಲದ ಮೇಲಣ ಭೋಗವೇನಾದರೇನೋ ? ನಾನಾವರ್ಣದ ಸಂಸಾರ ಹಾವ
ಹಾವಡಿಗನ ಸ್ನೇಹದಂತೆ. ತನ್ನಾತ್ಮವೇ ತನಗೆ ಹಗೆಯಾದ ಬಳಿಕ ಬಿನ್ನಾಣವುಂಟೆ,
ಮಹಾದಾನಿ ಕೂಡಲ ಸಂಗಮದೇವ ?

ಅಕಟಕಟ, ಶಿವ ನಿನಗಿನಿತು ಕರುಣವಿಲ್ಲ. ಅಕಟಕಟ, ಶಿವ ನಿನಗಿನಿತು ಕೃಪೆಯಿಲ್ಲ. ಏಕೆ ಹುಟ್ಟಿಸಿದೆ ಇಹಲೋಕದುಃಖಿಯ, ಪರಲೋಕದೂರನ? ಏಕೆ ಹುಟ್ಟಿಸಿದೆ, ಕೂಡಲಸಂಗಮದೇವ ಕೇಳಯ್ಯಾ, ಎನಗಾಗಿ ಮತ್ತೊಂದು ತರು ಮೃಗಾದಿಗಳಿದ್ದಿಲ್ಲವೇ?

ತಂದೆ ತಾಯಿ ನೀನು, ಬಂಧು ನೀನು, ಬಳಗ ನೀನು. ನೀನಲ್ಲದೆ ಮತ್ತಾರು ಇಲ್ಲವಯ್ಯಾ, ಕೂಡಲಸಂಗಮದೇವಾ, ಹಾಲಲದ್ದು, ನೀರಲದ್ದು.

ಎನಿಸುಕಾಲ ಕಲ್ಲು ನೀರೊಳಗಿದ್ದರೇನು ನೆನೆದು ಮೃದುವಾಗಬಲ್ಲುದೆ? ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ, ಮನದಲ್ಲಿ ದೃಢವಿಲ್ಲದನ್ನಕ್ಕ? ನಿಧಾನವ ಕಾಯ್ದಿದ್ದ ಬೆಂತರನಂತೆ ಅದರ ವಿಧಿ ಎನಗಾಯಿತ್ತು, ಕೂಡಲಸಂಗಮದೇವ.

ಆರಾಧ್ಯ ಪ್ರಾಣಲಿಂಗವೆಂದರಿದು, ಪೂರ್ವಗುಣವಳಿದು, ಪುನರ್ಜಾತನಾದ ಬಳಿಕ, ಸಂಸಾರ ಬಂಧುಗಳೆನ್ನವರೆಂದರೆ, ನಂಟುಭಕ್ತಿ ನಾಯಕ ನರಕ ಇಂತೆಂದುದು ಕೂಡಲಸಂಗನ ವಚನ.

ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯ. ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ. ದಾಸಯ್ಯ ಶಿವದಾನವನೆರೆಯ ನೋಡಯ್ಯಾ! ಮನ್ನಣೆಯ ಚೆನ್ನಯ್ಯನೆನ್ನ ಮನ್ನಿಸ. ಉನ್ನತ ಮಹಿಮ, ಕೂಡಲಸಂಗಮದೇವ, ಶಿವಧೋ, ಶಿವಧೋ.

ಅಪ್ಪನು ಡೋಹರ ಕಕ್ಕಯ್ಯನಾಗಿ, ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕುವೆನು. ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನರಿವೆನಯ್ಯ. ಕಷ್ಟಜಾತಿ ಜನ್ಮದಲಿ ಜನಿಸಿದೆ. ಎನಗಿದು ವಿಧಿಯೇ ಕೂಡಲ ಸಂಗಮದೇವಾ?

ಸೆಟ್ಟಿ ಎಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹರ ನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚೆನ್ನಯ್ಯನ? ಆನು ಹಾರುವನೆಂದಡೆ ಕೂಡಲಸಂಗಯ್ಯ ನಗುವನಯ್ಯ.

ಆರು ಮುನಿದು ಎಮ್ಮನೇನು ಮಾಡುವರು? ಊರು ಮುನಿದು ಎಮ್ಮನೆಂತು ಮಾಡುವರು? ನಮ್ಮ ಕುನ್ನಿಗೆ ಕೂಸ ಕೊಡಬೇಡ. ನಮ್ಮ ಸೊಣಗಂಗೆ ತಳಿಗೆ ಯಲಿಕ್ಕಬೇಡ. ಆನೆಯ ಮೇಲೆ ಹೋಹವನ ಶ್ವಾನ ಕಚ್ಚಬಲ್ಲುದೆ, ನಮಗೆ ನಮ್ಮ ಕೂಡಲಸಂಗಯ್ಯನುಳ್ಳನ್ನಕ್ಕ?

ಕೊಲ್ಲುವನೇ ಮಾದಿಗನು, ಹೊಲಸು ತಿಂಬವನೇ ಹೊಲೆಯ. ಕುಲವೇನೋ, ಆವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು.

ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ! ಉಂಬ ಜಂಗಮ ಬಂದರೆ ನಡೆ ಎಂಬರು, ಉಣ್ಣದ

ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ! ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನ ಮಾಡಿದರೆ ಕಲ್ಲು ತಾಗಿದ ಮಿಟ್ಟೆಯಂತಪ್ಪರಯ್ಯ.

ಎರೆದರೆ ನೆನೆಯದು, ಮರೆದರೆ ಬಾಡದು. ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ. ಕೂಡಲಸಂಗಮದೇವ, ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು.

ಉಳ್ಳವರು ಶಿವಾಲಯವ ಮಾಡುವರು. ನಾನೇನ ಮಾಡುವೆ? ಬಡವನಯ್ಯ! ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ. ಕೂಡಲ ಸಂಗಮದೇವ ಕೇಳಯ್ಯ, ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

ಆಡಿದರೇನು, ಹಾಡಿದರೇನು, ಓದಿದರೇನು, ತ್ರಿವಿಧ ದಾಸೋಹವಿಲ್ಲದನ್ನಕ್ಕ? ಆಡದೇ ನವಿಲು, ಹಾಡದೇ ತಂತಿ, ಓದದೇ ಗಿಣಿ, ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ.

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ ಕೂಡಲಸಂಗಮ ದೇವಾ, ನಿಮ್ಮ ಚರಣಕಮಲದೊಳಗಾನು ತುಂಬಿ.

ಎನ್ನ ಕಾಯವ ದಂಡಿಗೆಯ ಮಾಡಯ್ಯ. ಎನ್ನ ಶಿರವ ಸೋರೆಯ ಮಾಡಯ್ಯ. ಎನ್ನ ನರವ ತಂತಿಯ ಮಾಡಯ್ಯ. ಎನ್ನ ಬೆರಳ ಕಡ್ಡಿಯ ಮಾಡಯ್ಯ. ಬತ್ತೀಸ ರಾಗವ ಹಾಡಯ್ಯ. ಉರದಲೊತ್ತಿ ಬಾರಿಸು ಕೂಡಲಸಂಗಮದೇವ.

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ. ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ ಅನಾಚಾರವೇ ನರಕ. ಕೂಡಲಸಂಗಮದೇವ ನೀವೇ ಪ್ರಮಾಣ.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ, ಕೂಡಲ ಸಂಗಮದೇವ.

ಪುಣ್ಯಪಾಪಗಳೆಂಬುವು ತಮ್ಮ ಇಷ್ಟ ಕಂಡಿರೆ. ಅಯ್ಯ ಎಂದಡೆ ಸ್ವರ್ಗ, ಎಲವೊ ಎಂದಡೆ ನರಕ. ದೇವ ಭಕ್ತ ಜಯ ಜೀಯ ಎಂಬ ನುಡಿಯೊಳಗೆ ಕೈಲಾಸ ವಿಹುದು ಕೂಡಲ ಸಂಗಮದೇವ.

ಪರಚಿಂತೆ ನಮಗೇಕಯ್ಯ? ನಮ್ಮ ಚಿಂತೆ ನಮಗೆ ಸಾಲದೆ? ಕೂಡಲಸಂಗಯ್ಯ ಒಲಿವನೋ ಒಲಿಯನೋ ಎಂಬ ಚಿಂತೆ ಹಾಸಲುಂಟು, ಹೊದೆಯಲುಂಟು.

ಎಲ್ಲರೂ ವೀರರು, ಎಲ್ಲರೂ ಧೀರರು, ಎಲ್ಲರೂ ಮಹಿಮರು, ಎಲ್ಲರೂ ಪ್ರಮಥರು! ಕಾಳಗದ ಮುಖದಲ್ಲಿ ಕಾಣಬಹುದು, ಓಡುವ ಮುಖದಲ್ಲಿ ಕಾಣ ಬಾರದು. ನಮ್ಮ ಕೂಡಲಸಂಗಮದೇವನ ಶರಣರು ಧೀರರು, ಉಳಿದವರೆಲ್ಲ ಅಧೀರರು.

ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆಮಾರುವೋದೆನೆಂದರೆ, ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು. ಧನವನಲ್ಲಾಡಿಸಿ ನೋಡುವೆ ನೀನು, ಇವೆಲ್ಲಕ್ಕಂಜದಿದ್ದರೆ, ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವ.

ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ. ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ. ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡಿಯಾಣೆಯ ಮಾಡಿ, ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು ಕೂಡಲಸಂಗಮದೇವ.

ಇರಿಸಿಕೊಂಡು ಭಕ್ತರಾದರೆಮ್ಮವರು. ತರಿಸಿಕೊಂಡು ಭಕ್ತರಾದರೆಮ್ಮವರು. ಜರಿಸಿಕೊಂಡು ಭಕ್ತರಾದರೆಮ್ಮವರು. ಕೊರಸಿಕೊಂಡು ಭಕ್ತರಾದರೆಮ್ಮವರು. ಕೂಡಲಸಂಗನ ಶರಣರಿಗೆ ಮುನಿಸ ತಾಳಿ ಎನ್ನ ಭಕ್ತಿ ಅರೆಯಾಯಿತ್ತು.

ಜಲವ ತಪ್ಪಿದ ಮತ್ಸ್ಯ ಬದುಕುವುದೇ ಸೋಜಿಗ. ಗಣ ತಿಂತಿಣಿಯೊಳ ಗಿರಿಸೆನ್ನ ಲಿಂಗವೇ. ಶಿವ ಶಿವ ಕೂಡಲಸಂಗಮದೇವ ಸೆರಗೊಡ್ಡಿ ಬೇಡುವೆನು.

ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲಿ, ಓರೆಯಾವಿನ ಬೆನ್ನ ಹರಿಯಲ ದೇಕಯ್ಯ ? ಲಜ್ಜೆಗೆಡಲೇಕೆ ? ನಾಣುಗೆಡಲೇಕೆ ? ಕೂಡಲಸಂಗಮದೇವಯ್ಯನುಳ್ಳ ನ್ನಕ್ಕ ಬಿಜ್ಜಳನ ಭಂಡಾರವೆನಗೇಕಯ್ಯ ?

ದಯವಿಲ್ಲದ ಧರ್ಮವಾವುದಯ್ಯ ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ. ದಯವೇ ಧರ್ಮದ ಮೂಲವಯ್ಯ. ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ.

ಆನೆ ಅಂಕುಶಕ್ಕಲ್ಲದೆ ಅಂಜುವುದೇ ಅಯ್ಯ ? ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೆ ? ಆನೀ ಬಿಜ್ಜಳಂಗಂಜುವೆನೆ ಅಯ್ಯ ? ಕೂಡಲಸಂಗಮದೇವ, ನೀನು ಸರ್ವಜೀವದಯಾಪಾರಿಯಾದ ಕಾರಣ ನಿಮಗಂಜುವೆನಲ್ಲದೆ ?

ಜೋಳವಾಳಿಯವ ನಾನಲ್ಲಯ್ಯ. ವೇಳೆವಾಳಿಯವ ನಾನಲ್ಲಯ್ಯ. ಹಾಳು ಗೆಟ್ಟೋಡುವ ಆಳು ನಾನಲ್ಲಯ್ಯ. ಕೇಳು ಕೂಡಲಸಂಗಮದೇವ ಮರಣವೇ ಮಹಾನವಮಿಯೆನಗೆ.

ಆಯುಷ್ಯ ತೀರಿದಲ್ಲದೆ ಮರಣವಿಲ್ಲ. ಭಾಷೆ ತೀರಿದಲ್ಲದೆ ದಾರಿದ್ರ್ಯವಿಲ್ಲ. ಅಂಜ ಲೇಕೋ ಲೋಕವಿಗುರ್ಬಣೆಗೆ ? ಅಂಜಲೇಕೋ ಕೂಡಲಸಂಗಮದೇವ ನಿಮ್ಮಾಳಾಗಿ ?

ಕಲಿಯ ಕೈಯ ಕೈದುವಿನಂತಿರಬೇಕಯ್ಯ. ಎಲುದೋರ ಸರಸವಾಡಿದರೆ ಸೈರಿಸಬೇಕಯ್ಯ. ರಣದಲ್ಲಿ ತಲೆ ಹರಿದು ನೆಲಕ್ಕೆ ಬಿದ್ದು ಬೊಬ್ಬಿಡಲದಕ್ಕೆ ಒಲಿವ ಕೂಡಲಸಂಗಮದೇವ.

"ಸಾಕುಮಾಡೈ ತಂದೆ ಲೋಕದಾಟವನಿನ್ನು.
ತೆರಪುಗೊಂಡು ತಂದೆ ಬಂದಿಹೆನು ಬಸವನು ನೊಂದೆ."

—ಹರಿಹರ : ಬಸವರಾಜದೇವರ ರಗಳೆ

## ೭. ಹರಿಹರ : ಸಂಗನು ಬಸವಣ್ಣನವರನ್ನು ಕಲ್ಯಾಣಕ್ಕೆ ಕಳುಹಿಸಿದ್ದು

ಸಂಗಂ ಬಸವನೊ ಬಸವಂ
ಸಂಗನೊ ತಮ್ಮಿರ್ಬರೊರ್ಬರಂತೊರ್ಬರೊ ಮೇಣ್
ಸಂಗಂ ಬಸವನೊ ಬಸವಂ
ಸಂಗನೊ ಎನಿಪೊಂದಭೇದಭಾವದೊಳಿರ್ದರ್

ಇಪ್ಪಲ್ಲಿ ಕನಸಿನೊಳು……………ಎಳವಿಸಿಲ ಬೆಳಗಂ ತರುಣ ತರಣಿಗೆ ಕಡಂಗೊಡುವ ಪ್ರಭಾದುಕೂಲದಂತಿರ್ದ ಪುಲಿದೊಗಲಿಂದೊಪ್ಪಿ, ಪಶುಪತಿ ಬಸವನ ಮನದ ಮೊನೆಯೊಳೊಪ್ಪೆ ಮೂರ್ತಿಗೊಂಡು ;

ಎಲೆ ಮಗನೆ ಬಸವ ಬಸವಣ್ಣ ಬಸವಿದೇವ, ನಿನ್ನ ಮಹಿತಳದೊಳು ಮೆಱೆದಪೆವು. ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು–ಎಂಬ ನುಡಿಯೊಡನೆ ಕನಸಿನ ಮಾತು ಮನವನಿಮ್ಮೆಯ್ಗಂಡು, ನಿದ್ರೆ ತಿಳಿದು ಕಣ್ದೆಱೆದು ಕೆಲಬಲನಂ ನೋಡಿ ಬೆಚ್ಚಿ ಬೆಗಡುಗೊಂಡು ಅನುತಾಪವೇಱೆ ವಿರಹಂ ಹೊಮ್ಮಿ ಕಣ್ಗೆಟ್ಟಗಲಲಾರದೆ ರಂಗಮಂಟಪದ ಕಂಭವಂ ಘಳಿಲನೆ ಹಾಯ್ದು ದೇವ ದೇವ ಸಂಗ ಕಂಡೈ. ಕೆಟ್ಟೆ ಕೆಟ್ಟೆಂ. ತೊಟ್ಟನಿಂತು ಕಣ್ ನೋಡದೆ ಹುಣ್ಣ ನೋಡದೆ ಹೋಗೆಂಬರೆ ? ಗಗನದಿಂದಿಳಿವಂಗಾಧಾರವಾಗುತ್ತೆ ತಪ್ಪುವರೆ ? ಕಾಳ್ಕಿಚ್ಚಿನಂ ಬೇವಂಗೆ ತಂಪಿನ ಸೋನೆಯ ಮಳೆಯಾಗುತ್ತೆ ಮಾಣ್ಬರೆ ? ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತೆ ಪಿಂಗುವರೆ ? ನರಲೋಕದೊಳಾಳಲೀಯದೆ ಚಂಡಿಕೆವಿಡಿದುದ್ಧರಿಸಲೆಂದಾಳ್ಗೊಂಡ ಗುರುವೆ, ಪರಮ ಬಂಧುವೆ, ಪ್ರಾಣವೆ, ಬೆಳುದಿಂಗಳೇಕೆ ಬಿಸುಪೇಕೆ ? ಅಮೃತವೇಕೆ ವಿಷವೇಕೆ ? ಬೆಳಗೇಕೆ ತಮವೇಕೆ ? ನೀನೇಕೆ ಈ ನುಡಿಯೇಕೆ ? ಹೊದ್ದಿದರಂ ಹೋಗೆಂಬರೆ ? ಸಾರ್ದರಂ ಸೈರಿಸೆಂಬರೆ ? ನಂಬಿದವರ ಗೋಣಂ ಕೊಯ್ವರೆ ? ಶಿಶುವನಿಱಿವರೆ ? ಪಶುವಂ ಕೊಲುವರೆ ? ಎನ್ನಂ ಬಿಡುವರೆ ? ಕರುಣಿ ಕರುಣಿ, ಕರುಣಂ ಲೇಸಾಯ್ತು. ಅರ್ಚಿಸಿತಕ್ಕೆ ಫಲವಾಯ್ತು. ಇನ್ನೇನು ಇನ್ನೇನು ?—ಎಂದೊಟ್ಟೆ ಒಱಲಿ ಪರಿತಂದು ಸಂಗನಂ ತಕ್ಕೈಸಿ ಪಳವಿಸಿ ಪಲುಂಬಿ ಗೋಳಿಟ್ಟು ಆಲಿಟ್ಟು ಸಿವದಿಟ್ಟು ಮೊಱೆಯಿಟ್ಟು ಮೂರ್ಛಿಸುತ್ತೆಂತಕ್ಕೆಚ್ಚತ್ತು ಮೆಲ್ಲಮೆಲ್ಲನಾಲಿಂಗನಮಂ ಸಡಿಲ್ಚಿ ನಡೆತಂದು ;

ಮನವಲ್ಲದ ಮನದೊಳಗ್ಘವಣಿಹೂಗಳಂ ಬೇಗಂ ತಂದಂತೆಂತೆ ಪೂಜೆಗೆಯ್ದಾರೋಗಣೆಗಿತ್ತು, ಮೋಹದ ಮುನಿಸು ಮನದೊಳ್ ತೀವಿ ಪ್ರಣಯ ಕಲಹಂ ಬಲಿದು ಪ್ರಸಾದಮನೊಲ್ಲದೆ ಬಸವಂ ಮುಸುಂಕಿಟ್ಟು ಪಶುಪತಿಯ ಪದದ ಕೆಳಗೆ ನಿರ್ವೇಗದಿಂ ಪಟ್ಟಿರ್ದಿರೆ, ರಾತ್ರಿಯೊಳು ನೇತ್ರತ್ರಯಂ ಭಕ್ತನಿರವಂ ನೋಡಿ ಕೊರಗಿ ಮೋಹದ ಮಹಿಮೆಗೆ ಮರವಟ್ಟು ಭಕ್ತಿಯ ಭರಕ್ಕೆ ಕೌತುಕಂಗೊಂಡಗಲಲಾಱದ ಮಗಂಗೆ

ಮಿಗೆ ಕರುಣಿಸಿ, ಮತ್ತೆ ಕನಸಿನೊಳು ಬಂದು–ಎಲೆ ಮಗನೆ ಎಲೆ ಕಂದ ಎಲೆ ಬಸವ' ನಿನ್ನನಗಲಿ ನಾನಿರಲಾಱೆ. ನಿನಗಿನಿತು ನಿರೋಧವೇಕೆ ? ಬೇಡಯ್ಯ ಬೇಡೆನ್ನರಸ' ಬೇಡೆನ್ನ ಭಕ್ತನಿಧಿಯೆ. ನಿನ್ನೊಡನೊಡನೆ ಬಿಡುದೆ ಬಪ್ಪೆಂ....

ಇಂತು ಬೆಸಸುತ್ತಮಿರೆ ಬಸವನಾಗಳೆ ಕೇಳ್ದು
ಅಂತಸ್ಥದೊಳು ವಿರಹಚಿಂತೆಯಂ ಮಿಗೆ ತಾಳ್ದು
ಸಲೆ ಮತ್ತೆ ಮತ್ತೆ ಪೋಗೆಂದಪಂ ಸಂಗಮಂ
ನಲಿದು ಪೂಜಿಸಲೀಯನಕ್ಕಟಾ ಸಂಗಮಂ
ಆದಡಂ ಪೋಗಿ ನೋಡುವೆನೆಂದು ಬಗೆಗೊಂಡು
ಆದರಂ ಕುಂದುತ್ತೆ ಚಿಂತೆಯಂ ಕೈಕೊಂಡು
ಶಿವಭಕ್ತ ಸಂತತಿಗೆ ಬೆಸಕಯ್ಯುವಾಯಮಂ
ಶಿವಭಕ್ತಿ ನೆಲೆಗೊಳ್ವ ಸಮಸುಖ ಸಹಾಯಮಂ
ನೆನೆದು ತನ್ನೊಳಗೊಳಗೆ ತಿಳಿದಂ ಶಿವಧ್ಯಾನಿ
ಅನುಪಮ ಶಿವೈಕ ಸಮ್ಯಜ್ಞಾನಿ ಕಡುಮಾನಿ
ಅಕ್ಷರ ಜ್ಞಾನಮುಂಟದನ್ನೈದೆ ಮಾಱುವೆಂ
ತ್ರ್ಯಕ್ಷನಣುಗರ್ಗಾದ ಹೊಂಗಳಂ ಬೀಱುವೆಂ
ಅವರ ಪ್ರಸಾದಮಂ ನಲವಿಂದ ತಾಳುವೆಂ
ಅವರ ಕಾರುಣ್ಯರಸಜಲದೊಳೋಡಾಲಾಡುವೆಂ
ಎಂದಲ್ಲಿ ಗಣಕ ಕಾಯಮಕಂ ಮನಂಗೊಂಡು
ನಿಂದದಕ್ಕನುಕೂಲವೇಷಮಂ ಕೈಕೊಂಡು
ಸಂಗಂಗೆ ಬಿನ್ನೈಸಲೆಂದು ಹತ್ತಿರೆ ಬಂದು
ಹಿಂಗಲಾಱದೆ ಕಣ್ಗಳಿಂ ಶೋಕಜಲಬಿಂದು
ತೆರಳೆ ಸೆರೆ ಬಿಗಿದು ಗದುಗದಿಸಿ ಬಿಕ್ಕುತೆ ಬಿದ್ದು
ಹೊರಳುತ್ತಮುತ್ತಗಲಲಾಱದೊಱಲುತ್ತೆದ್ದು
ನಿಂದಿರುತ್ತೆಲೆ ಸಂಗ ಹೋಗಿಬಂದಪೆನಯ್ಯ
ತಂದೆ ನಿನ್ನಂ ನಂಬಿ ನಚ್ಚಿ ಹೋದಪೆನಯ್ಯ
ಅಗಲಲಾಱೆಂ ದೇವದೇವ ಕರುಣಿಪುದೆನುತೆ
ಬಗೆ ಹಚ್ಚಿ ತನು ಹೆಚ್ಚಿ ಕೊಟ್ಟಂತೆ ನಿಂದಿರುತೆ
ಮುಂದಿರ್ದ ಬಸವನಂ ಕಂಡು ಸಂಗಂ ಮಱುಗಿ
ಬಂದಪ್ಪಿ ಕಣ್ಣ ನೀರಂ ತೊಡೆದು ಮಿಗೆ ಮಱುಗಿ
ಬೇಡೆನ್ನ ಕಂದ ನಿನ್ನೊಡನೆ ಬಪ್ಪೆಂ ಬಸವ
ನೋಡು ನಿನ್ನಾಣೆ ನಿನ್ನೊಡನೆ ಬಪ್ಪೆಂ ಬಸವ

ನಿನ್ನನಗಲಿರಲಾರ್ಪನೇ ಬಸವ ಬಸವಣ್ಣ
[ಇನ್ನಿ]ಂತಳುತ್ತಿಪ್ಪಡೆನಗರಿದು ಬಸವಣ್ಣ
ಕಂದ ಬೇಡಯ್ಯ ಬೇಡಯ್ಯ ನೇಹದ ನಿಧಿಯೆ
ಹಿಂದುಗೊಂಡೇ ಬಪ್ಪೆನೆನ್ನ ಸುಕೃತದ ಸುಧೆಯೆ
ನೆನೆಯೆ ಮುಂದಿರ್ದಪೆಂ ಕರೆದೊಡೋ ಎಂದಪೆಂ
ಮನದೊಳಗೆ ಕರದೊಳಗೆ ತನುವಿನೊಳಗಿರ್ದಪೆಂ
ನಿಂದಲ್ಲಿ ನಿಂದಪೆಂ ನಡೆದಲ್ಲಿ ನಡೆದಪೆಂ
ಬಂದಲ್ಲಿ ಬಂದಪೆಂ ನುಡಿದಲ್ಲಿ ನುಡಿದಪೆಂ
ಬಿಟ್ಟುದಂ ಬಿಟ್ಟಪೆಂ ಪಿಡುದುದಂ ಪಿಡಿದಪೆಂ
ನಟ್ಟುದಂ ನಟ್ಟಪೆಂ ಕೇಳ್ದುದಂ ಕೇಳ್ದಪೆಂ
ಆಡಿದುದನಾಡುವೆಂ ನೋಡಿತಂ ನೋಡುವೆಂ
ಮಾಡಿತಂ ಮಾಡುವೆಂ ಕೂಡಿತಂ ಕೂಡುವೆಂ
ನಡೆಯಯ್ಯ ನಡೆ ಮಗನೆ ನಡೆ ಕಂದ ಬಸವಣ್ಣ
ಪೊಡವಿಗಧಿಪತಿಯಾಗಿ ಬಾಳೆನ್ನ ಬಸವಣ್ಣ

ಎಂದಲ್ಲಿ ಕರುಣಿಸಿದ ಮಾತು ಸಂಬಳವಾಗಿ
ಬಂದನೆಂತೆಂತಕ್ಕೆ ಅಗಲಲಾಱದೆ ರಾಗಿ
ಸಂಗಮನ ಕರುಣವೇ ತನಗೆ ಬೆಂಬಲವಾಗಿ
ಸಂಗಮ ಧ್ಯಾನವೇ ತನಗೆ ಸಂಗಡವಾಗಿ

## ೮. ಹರಿಹರ : ಬಸವಣ್ಣನವರ ಗುಣ

ಪುಣ್ಯಲೋಭಿ ಭಕ್ತರ ಬಾಕುಳಿ ಶರಣರ ಸೂಱೆ ಸಜ್ಜನರ ಸೆಱೆಮಾಱಿ
ಶರಣರ ಸಂಗದ ಶಾಶ್ವತನೆನಿಪ ಬಸವರಾಜಂ ಲಿಂಗ ಜಂಗಮ ಪ್ರಸಾದಹೃದಯನಾಗಿ
ಶರಣರೊಳು ಸದ್ಗೋಷ್ಠಿಯಿಂದಿರ್ದು ಮತ್ತಮಿಂತೆಂದಂ—

ದೇವದೇವ, ನಿಮ್ಮರ್ಥಮಂ ನಿಮಗೆ ತೊತ್ತುಗೆಲಸವಂ ಮಾಡಿ ಬೇಡಿತ
ನೀಡುವ ಕಿಂಕರನೆಂದು ನೀವೆ ಕೊಂಡು ಕೊನೆದಾಡಿಸುವ ನಿಮ್ಮ ಕಣ್ಣ ಮೊದಲ
ಕಪ್ಪಡದ ಹಾಹೆ ಆನೆಂಬುದು. ಹಲವಂ ನುಡಿವುದೆಲ್ಲಂ ಪುಸಿ, ನಡೆವುದೆಲ್ಲಂ ತಪ್ಪು
ನೇಮವಱಿಯದ ನೀರಸಂ ಪೂಜೆಯಱಿಯದ ಪುಣ್ಯದೂರಂ ಹಾಡಲರಿಯದ
ಹಸುಳೆಯಪ್ಪೆನ್ನೊಳು ಲೇಸನಱಸದೆ ತಪ್ಪಂ ನೋಡದೆ ಕರುಣಿಪುದು ಎಂದು ಬಿನ್ನೈ
ಸಿದ ಬಸವಂಗೆ ಮೆಚ್ಚಿ ಮಾಹೇಶ್ವರಕುಲಂ ಘೋರನೆ ಪರಸಿ ಹಾರೈಸಿ ಹಿಗ್ಗಿ ತಣಿದ
ಕುಳ್ಳಿರ್ದು ಮೆಚ್ಚಿ ಮನಂ ತೀವಿದಾನಂದದಿಂ ಮಿಕ್ಕುಮೀಱಿ—

ಎಲೆ ಬಸವ ಬಸವಣ್ಣ ಬಸವಯ್ಯ ಬಸವರಸ ಬಸವರಾಜ ಬಸವದೇವ, ಕೇಳಯ್ಯ. ನಿನ್ನ ನೇಮವಿದಾರ್ಗುಂಟು ? ಗುರುಲಿಂಗದೊಳೆರಡಿಲ್ಲದಿಪ್ಪೆ. ಶರಣರಂ ಸಂಗನೆಂದೆ ಕಾಣ್ಬೆ. ಬಂದ ಭಕ್ತರನತ್ಯಾದರಿಪೆ. ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ. ಬೇಡಿದುದ ಶರಣರ್ಗಿಲ್ಲೆನ್ನದೀವೆ. ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ. ಜಾಗ್ರತ್‌ಸ್ವಪ್ನಸುಷುಪ್ತಿಯವಸ್ಥಾತ್ರಯಂಗಳೊಳು ಶರಣಂ ಸಂಗನೆಂದಲ್ಲದೆ ಕಾಣೆ. ನಿಚ್ಚ ಶಿವರಾತ್ರಿಯನಚ್ಚರಿಯಿಂ ಪಾಳ್ಪೆ. ಜಂಗಮಪ್ರಾಣಿಯಾಗಿಪ್ಪೆ. ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೋಡೆ, ನುಡಿಯೆ, ಮುಟ್ಟೆ, ಕೇಳೆ. ಶಿವಸಮಯವನುದ್ಧರಿಸುವೆ. ಲಿಂಗದಲ್ಲಿ ಕಠಿನಮಂ ಕೇಳೆ, ಜಂಗಮದಲ್ಲಿ ಜಾತಿಯನಱಸೆ. ಪ್ರಸಾದದಲ್ಲಿ ಅಪವಿತ್ರತೆಯನಱಿಯೆ, ಪರಾಂಗನೆಯರಂ ಹೆತ್ತತಾಯ್ಗಳೆಂಬೆ. ಪರದ್ರವ್ಯಮಂ ಕಿಲ್ಬಿಷವೆಂದು ಮುಟ್ಟೆ. ನಡೆದು ತಪ್ಪೆ, ನುಡಿದು ಹುಸಿಯೆ, ಹಿಡಿದು ಬಿಡೆ, ಬಿಟ್ಟು ಹಿಂಗಲೀಯೆ, ಕೊಟ್ಟು ನೆನೆಯೆ, ನಟ್ಟು ಕೀಳೆ, ಮುಟ್ಟಿ ಪೆಱಪಿಂಗೆ, ಕೂಡಿ ತಪ್ಪೆ, ನೋಡಿ ನಿರಾಕರಿಸೆ, ನೆನೆದು ಮಱೆಯೆ. ಮನದೊಳೋವರಿಯಿಲ್ಲ, ಬುದ್ಧಿಯೊಳು ವಿಸಂಚವಿಲ್ಲ, ಅಹಂಕಾರದೊಳು ಗರ್ವವಿಲ್ಲ, ಚಿತ್ತದೊಳು ಹೊಱೆಯಿಲ್ಲ. ಕಾಮವಿಲ್ಲ, ಕೋಪದ ಮಾತೇಕೆ, ಲೋಭದ ಗಾಳಿ ಪೀಡದು, ಮೋಹಕೆ ತೆಱಹಿಲ್ಲ, ಮದದ ಸೊಗಡು ಹೊದ್ದದು, ಮತ್ಸರಕ್ಕಿಂಬಿಲ್ಲ ಬಸವರಾಜ, ನಿನ್ನ ಗುಣಗಳಂ ಬಣ್ಣಿಸಲೆಮ್ಮಳವಲ್ಲ. ಈಶನ ಮಿಾಸಲಪ್ಪ ಭಕ್ತ, ನಿನಗೆಣೆಯಿಲ್ಲ ಪಡಿಯಿಲ್ಲ, ಪಾಸಟಿಯಾವಂ? ಪಾಷಂಡಿ ಭೂಮಿಯೊಳು ಶಿವಭಕ್ತಿಯನಾರಂಭಿಸಿ ಸಾಮರ್ಥ್ಯಮಂ ಬಿತ್ತಿ ಪ್ರತ್ಯಕ್ಷಂಗಳಂ ಬೆಳೆದು ಗಣಪರ್ವಂಗಳಂ ಸುಫಲಂ ಮಾಡಲೆಂದು ಬಂದ ಕಾರಣಿಕ ಬಸವ, ನಿನ್ನ ದೆಸೆಯಿಂದೆಮ್ಮ ಭಕ್ತಿ ಬಣ್ಣವೇಱಿತು– ಎಂದಡಿಗಡಿಗೆ ಮೆಚ್ಚಿ ತೂಗಾಡುವ ಗಣಂಗಳ ಚರಣಂಗಳಂ ಬಿಗಿಯಪ್ಪಿ ಬಸವರಾಜಂ ಪೊಗಳ್ತೆಗೆ ತಲ್ಲಣಿಸಿ ತಗ್ಗಿ ಮಲ್ಲಣಿಗೊಂಡಾಗಳಾಗಳಿನ ಸಂಗತಿಗೆ ಹೊಸಹೊಸ ಗೀತಮಂ ಕೇಳಿಸುತ್ತಿರ್ದನ್....



## ೯. ಮಹದೇವಿಯಕ್ಕ : ಶಿವನೇ ನನ್ನ ಗಂಡ

### ಸುಮಾರು ಕ್ರಿ.ಶ. ೧೧೬೦

ವನವೆಲ್ಲ ನೀವೆ ; ವನದೊಳಗಣ ದೇವತರುವೆಲ್ಲ ನೀವೆ. ತರುವಿನೊಳಗಾಡುವ ಖಗಮೃಗವೆಲ್ಲ ನೀವೆ. ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ.

ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ. ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ. ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ. ನೆನಹಿಂಗೆ ಅರಿವಾಗಿ ಕಾಡಿತ್ತು

ಮಾಯೆ. ಜಗದ ಜಂಗುಳಿಗಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ. ಚೆನ್ನ ಮಲ್ಲಿಕಾರ್ಜುನ, ನೀನೊಡ್ಡಿದ ಮಾಯೆಯನಾರೂ ಗೆಲಲಾರರು.

ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡಿತ್ತು ನೋಡಾ! ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ! ಚೆನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆ ಇಲ್ಲ, ಮರಹಿಲ್ಲ. ಅಭಿಮಾನವೂ ಇಲ್ಲ.

ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರ ವನಿಕ್ಕಿ ಮುತ್ತು ಮಾಣಿಕದ ಮೇಲುಕಟ್ಟ ಕಟ್ಟಿ ಮದುವೆಯ ಮಾಡಿದರು, ನಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರೆ ಸ್ಥಿರ ಸೇಸೆಯನಿಕ್ಕಿ, ಚೆನ್ನಮಲ್ಲಿಕಾರ್ಜುನ ನೆಂಬ ಗಂಡಂಗೆನ್ನ ಮದುವೆಯ ಮಾಡಿದರು.

ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ, ಆಲಿಕಲ್ಲ ಹಸೆಯ ಹಾಸಿ, ಕಾಲಿಲ್ಲದ ಹೆಂಡತಿಗೆ, ತಲೆಯಿಲ್ಲದ ಗಂಡ ಬಂದು ಮದುವೆಯಾದನು. ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು.

ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳಗುಂದದರಿಸಿನವೆನಗೆ, ದಿಗಂಬರವೇ ದಿವ್ಯಾಂಬರವೆನಗೆ, ಶಿವಪಾದರೇಣುವೇ ಅನುಲೇಪನವೆನಗೆ, ರುದ್ರಾಕ್ಷಿಯೆ ವೈದೊಡಿಗೆ ಎನಗೆ, ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ, ಚೆನ್ನಮಲ್ಲಿ ಕಾರ್ಜುನನೇ ಗಂಡನೆನಗೆ, ಆನು ಚೆನ್ನ ಮಲ್ಲಿಕಾರ್ಜುನಂಗೆ ಮದುವಳಿಗೆ, ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ.

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯ! ಸಮುದ್ರದ ತಡಿಯಲ್ಲಿ ಮನೆಯ ಮಾಡಿ, ನೊರೆ ತೆರೆಗಳಿಗಂಜಿದಡೆಂತಯ್ಯ ! ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ ! ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯ, ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿ ನಿಂದೆಗಳು ಬಂದಡೆ, ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

ಅಯ್ಯಾ ನೀ ಕೇಳಿದರೆ ಕೇಳು, ಕೇಳದಿರ್ದೊಡೆ ಮಾಣು, ನಾ ನಿನ್ನ ಹಾಡಿ ದಲ್ಲದೆ ಸೈರಿಸಲಾರೆನಯ್ಯ ! ಅಯ್ಯಾ ನೀ ಒಲಿದರೆ ಒಲಿ, ಒಲಿಯದಿರ್ದೊಡೆ ಮಾಣು, ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯ ! ಅಯ್ಯಾ, ನೀ ಮೆಚ್ಚಿದರೆ ಮೆಚ್ಚು ಮೆಚ್ಚದಿರ್ದೊಡೆ ಮಾಣು, ನಾ ನಿನ್ನನಪ್ಪಿದಲ್ಲದೆ ಸೈರಿಸಲಾರನಯ್ಯಾ !

ಅಯ್ಯಾ ನೀ ನೋಡಿದೊಡೆ ನೋಡು, ನೋಡದಿರ್ದೊಡೆ ಮಾಣು, ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯ ! ಚೆನ್ನಮಲ್ಲಿಕಾರ್ಜುನಯ್ಯ, ನಾ ನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯ.

ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವಂಗಾನೊಲಿದೆನವ್ವ. ಎಡೆಯಿಲ್ಲದ ಕಡೆಯಿಲ್ಲದ, ತೆರಹಿಲ್ಲದ, ಕುರುಹಿಲ್ಲದ ಚೆಲುವಂಗಾನೊಲಿದೆ ಎಲೆ ಅವ್ವಾ, ನೀನು ಕೇಳಾ ತಾಯೆ. ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ. ಇದು ಕಾರಣ ಚೆನ್ನ ಮಲ್ಲಿಕಾರ್ಜುನ ಚೆಲುವ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು.

ವೇದ ಶಾಸ್ತ್ರ ಪುರಾಣಾಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿ ಭೋ ! ಇವ ಕುಟ್ಟಲೇಕೆ ? ಅತ್ತಲಿತ್ತ ಹರಿವ ಮನದ ಶಿರವನರಿದಡೆ, ಬಚ್ಚ ಬರಿಯ ಬಯಲು ಚೆನ್ನಮಲ್ಲಿಕಾರ್ಜುನ.

ಗಿರಿಯಲ್ಲದೆ ಹುಲ್ಲುಮೊರಡಿಯಲ್ಲಾಡುವುದೇ ನವಿಲು ? ಕೊಳನಲ್ಲದೆ ಕಿರಿವಳ್ಳಕ್ಕೆಳಸುವುದೆ ಹಂಸೆ ? ಮಾಮರ ತಳಿತಲ್ಲದೆ ಸ್ವರಗೈವುದೆ ಕೋಗಿಲೆ ? ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ ? ಎನ್ನ ದೇವ ಚೆನ್ನಮಲ್ಲಿಕಾರ್ಜುನ ನಲ್ಲದೆ, ಅನ್ಯಕ್ಕೆಳಸುವುದೇ ಎನ್ನ ಮನ ? ಕೇಳಿರೆ, ಕೆಳದಿಯರಿರಾ.

ಎನ್ನಂಗದಲ್ಲಿ ಆಚಾರವ ತೋರಿದನಯ್ಯ ಬಸವಣ್ಣನು. ಆಚಾರವೇ ಲಿಂಗ ವೆಂದರುಹಿದನಯ್ಯ, ಬಸವಣ್ಣನು. ಎನ್ನ ಪ್ರಾಣದಲ್ಲಿ ಅರಿವ ತೋರಿದನಯ್ಯ ಬಸವಣ್ಣನು. ಅರಿವೇ ಜಂಗಮವೆಂದು ಅರುಹಿದನಯ್ಯ ಬಸವಣ್ಣನು. ಚೆನ್ನಮಲ್ಲಿ ಕಾರ್ಜುನಯ್ಯ, ಎನ್ನ ಹೆತ್ತ ತಂದೆ ಸಂಗನ ಬಸವಣ್ಣ ಎನಗೀ ಕ್ರಮವ ನರುಹಿದನಯ್ಯ.

ಕಾಮನ ಗೆಲಿದೆನು ಬಸವಾ ನಿಮ್ಮ ದಯದಿಂದ. ಸೋಮಧರನ ಹಿಡಿ ತಪ್ಪೆನು ಬಸವಾ ನಿಮ್ಮ ಕೃಪೆಯಿಂದ. ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು, ಭಾವಿಸಲು ಗಂಡುರೂಪು, ಬಸವಾ ನಿಮ್ಮ ದಯದಿಂದ. ಅತಿಕಾಮಿ ಚೆನ್ನಮಲ್ಲಿಕಾರ್ಜುನಯ್ಯಂಗೆ ತೊಡರನಿಕ್ಕಿ ಎರಡುವರಿಯದೆ ಕೂಡಿದೆನು ಬಸವಾ ನಿಮ್ಮ ಕೃಪೆಯಿಂದ.

ಕಿಡಿ ಕಿಡಿ ಕೆದರಿದಡೆ, ಎನಗೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದುಬಿದ್ದರೆ, ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದರೆ ಎನಗೆ ಪುಷ್ಪ ವೆಂಬೆನು. ಚೆನ್ನಮಲ್ಲಿಕಾರ್ಜುನಯ್ಯಾ, ಶಿರ ಹರಿದು ಬಿದ್ದರೆ ಪ್ರಾಣ ನಿಮಗರ್ಪಿತ ವೆಂಬೆನು.

ಚಂದನವ ಕಡಿದು ಕೊರೆದು ತೇದೊಡೆ, ನೊಂದೆನೆಂದು ಕಂಪ ಬಿಟ್ಟಿತ್ತೆ? ತಂದು ಸುವರ್ಣವ ಕಡಿದೊರೆದೊಡೆ, ಬೆಂದು ಕಳಂಕ ಹಿಡಿದಿತ್ತೆ? ಸಂದು ಸಂದು ಕಡಿದ ಕಬ್ಬನು ಗಾಣದಲಿಕ್ಕಿ ಬೆಂದು ಪಾಕಾಗುಳ್ಳ ಸಕ್ಕರೆಯಾಗಿ ನೊಂದೆನೆಂದು ಸವಿಯ ಬಿಟ್ಟಿತ್ತೆ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೆ? ಎನ್ನ ತಂದೆ ಚೆನ್ನಮಲ್ಲಿಕಾರ್ಜುನದೇವಯ್ಯ ಕೊಂದೊಡೆ ಶರಣೆಂಬುದ ಮಾಣೆ.

ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ? ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ? ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರ ನಾರಾಧಿಸುವೆ? ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ, ನಾನಾರನರಿವೆ? ಚೆನ್ನಮಲ್ಲಿಕಾರ್ಜುನ, ನಿಮ್ಮಲ್ಲಿ ನೀವಾಗಿ ನಿಮ್ಮಿಂದ ಮರೆದೆನಯ್ಯಾ.

ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ ಹಾವಿನ ಸಂಗವೇ ಲೇಸು ಕಂಡಯ್ಯ. ಕಾಯದ ಸಂಗವೇ ಲೇಸು ಕಂಡಯ್ಯ. ತಾಯಿ ರಕ್ಕಸಿಯಾದಂತೆ ಕಾಯ ವಿಕಾರ. ಚೆನ್ನಮಲ್ಲಿಕಾರ್ಜುನಯ್ಯ ನೀನೊಲಿದವರು ಕಾಯಗೊಂಡಿದ್ದರೆನಬೇಡ.

ಬಂಜೆ ಬೇನೆಯನರಿಯಳು. ಬಲತಾಯಿ ಮುದ್ದ ಬಲ್ಲಳೆ? ನೊಂದ ನೋವ ನೋಯದವರೆತ್ತ ಬಲ್ಲರು? ಚೆನ್ನಮಲ್ಲಿಕಾರ್ಜುನ, ನೀನಿರಿದಲಗು ಒಡಲಲ್ಲಿ ಮುರಿದು ಹೊರಳುವಳ ನೀವೆತ್ತ ಬಲ್ಲಿರೆ ಎಲೆ ತಾಯಿಗಳಿರಾ?

ಅಳಿಸಂಕುಳವೇ, ಮಾಮರವೇ, ಬೆಳುದಿಂಗಳೇ, ಕೋಗಿಲೆಯೇ, ನಿಮ್ಮ ನಿಮ ನೆಲ್ಲರನು ಒಂದ ಬೇಡುವೆನು. ಎನ್ನೊಡೆಯ ಚೆನ್ನಮಲ್ಲಿಕಾರ್ಜುನದೇವರ ಕಂಡರೆ ಕರೆದು ತೋರಿರೆ.

ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ? ನೀವು ಕಾಣಿರೆ? ಕೊಳನ ತಡಿಯೊಳಾಡುವ ಹಂಸೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ ಗಿರಿಗಹ್ವರದೊಳಗಾಡುವ ನವಿಲುಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಚೆನ್ನಮಲ್ಲಿಕಾರ್ಜುನನೆಲ್ಲಿರ್ದನೆಂದು ನೀವು ಹೇಳಿರೆ, ನೀವು ಹೇಳಿರೆ.

ಆಕಾರವಲ್ಲದ ನಿರಾಕಾರದ ಲಿಂಗವ ಕೈಯಲ್ಲಿ ಹಿಡಿದು, ಕೊರಳಲ್ಲಿ ಕಟ್ಟಿದೆವೆಂದೆಂಬರು ನರಕಿ ಜೀವಿಗಳು. ಹರಿಬ್ರಹ್ಮರು ವೇದಶಾಸ್ತ್ರಂಗಳರಸಿ ಕಾಣದ ಲಿಂಗ. ಭಕ್ತಿಗೆ ಫಲಪದಂಗಳಲ್ಲದೆ ಲಿಂಗವಿಲ್ಲ. ಕರ್ಮಕ್ಕೆ ನರಕವಲ್ಲದೆ ಲಿಂಗವಿಲ್ಲ. ವೈರಾಗ್ಯಕ್ಕೆ ಮುಕ್ತಿಯಲ್ಲದೆ ಲಿಂಗವಿಲ್ಲ. ಜ್ಞಾನಕ್ಕೆ ಪರಿಭ್ರಮಣ

ವಲ್ಲದೆ ಲಿಂಗವಿಲ್ಲ. ಇದು ಕಾರಣ ಅದ್ವೈತದಿಂದ ತನ್ನ ತಾನರಿದು ತಾನಾದರೆ ಚೆನ್ನಮಲ್ಲಿಕಾರ್ಜುನ ಲಿಂಗ ತಾನೆ ಹೇರಿಲ್ಲ.

ಹೊಳೆವ ಕೆಂಜೆಡೆಗಳ, ಮಣಿಮಕುಟ ಒಪ್ಪುವ, ಸುಲಿಪಲ್ಲ, ನಗೆಮೊಗದ ಕಂಗಳ, ಕಾಂತಿಯಿಂ ಈರೇಳು ಭುವನವಂ ಬೆಳಗುವ ದಿವ್ಯಸ್ವರೂಪನ ಕಂಡೆ ನಾನು. ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು. ಗಂಡಗಂಡರೆಲ್ಲ ಹೆಂಡಹೆಂಡಿರಾಗಿ ಆಳುವ ಗರುವನ ಕಂಡೆ ನಾನು. ಜಗದಾದಿಶಕ್ತಿಯೊಳು ಬೆರಸಿಯೊಡನಾಡುವ ಪರಮಗುರು ಚೆನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು.

## ೧೦. ಹರಿಹರ : ಭಕ್ತಿಯ ಆವೇಶ

ಕರೆವುದದೆಂದು ಕಾಲ್ವಿಡಿಸಿಕೊಳ್ವುದದೆಂದು ದಯಾಕಟಾಕ್ಷದಿಂ
ಪೊರೆವುದದೆಂದು ಮೆಲ್ನುಡಿಗಳಂ ಮದವೇಱಿಪುದೆಂದು ಸೋಂಕಿನಿಂ
ಹರಿಪುದದೆಂದು ಸಂತಸದೆ ಪೆರ್ಚಿಪುದೆಂದು ಮನಸ್ವಿ ನೀಂ ಕರಂ
ಕರಗಿಪುದೆನ್ನನೆಂದೊಸೆದು ಪೇೞೆನಗಿಂದೆಲೆ ಹಂಪೆಯಾಳ್ದನೇ

ನೋಡದ ಕಣ್ಗಳೇಕೆ ಸಲೆ ಕೇಳದ ಕರ್ಣಮದೇಕೆ ಭಕ್ತಿಯಿಂ
ಪಾಡದ ಬಾಯದೇಕೆ ಪೆಸರ್ಗೊಳ್ಳದ ಜಿಹ್ವೆಯದೇಕೆ ಪೂಜೆಯಂ
ಮಾಡದ ಕೈಗಳೇಕೆ ನೆಱೆ ಸೋಂಕದ ದೇಹಮದೇಕೆ ಕೂಡಿಯು
ಳ್ಳಾಡದ ಚಿತ್ತವೇಕೆನಗೆ ಹಂಪೆಯ ಲಿಂಗವೆ ನಿಮ್ಮೊಳಳ್ಕಱಿಂ

ಸತಿಪುತ್ರರ್ ಮಿತ್ರರಾಪ್ತರ್ ತನುಧನಮನವೆಂಬಿಂತಿವಂ ನಿತ್ಯವೆಂದು
ಚ್ಚತರ ವ್ಯಾಸಂಗದಿಂ ಮೆಯ್ಯಱಿಯದೆ ಮರುಳಾಗಿರ್ದೆನೆನ್ನಂ ದುರಾಶಾ
ವೃತನಂ ದುರ್ಮೋಹಿಯಂ ದುಸ್ತರವಿಷಯವ್ಯಾಪ್ತನಂ ದುರ್ಧರೈನೋ
ಹತನಂ ದುರ್ಬೋಧನಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷಲಿಂಗ

ನಾನಾಜನ್ಮಂಗಳೊಳ್ ಬಾರದ ಪರಿಭವಮುಂ ಬಂದ ತನ್ನಂದಮುಂ ತಾ
ನೇನೆಂದೊಂದೆಳ್ಳನಿತ್ತಂ ನೆನೆಯದು ತನಗೆಂತಿಚ್ಛೆಯಂತಿರ್ದು ನಿನ್ನೀ
ಧ್ಯಾನಾರಂಭಕ್ಕಣಂ ಸಲ್ಲದು ಸುಡು ಸುಡು ಚೀ ! ಮನ್ಮನೋವೃತ್ತಿ ನಿನ್ನಂ
ತಾನಾಱೆಂ ನೀನೆ ಸಂತಂ ನಿಲಿಸಿದನೊಲವಿಂದಂ ವಿರೂಪಾಕ್ಷಲಿಂಗಾ

ಮೋಹಕ್ಕೊರ್ಕೇರೊರ್ಮೆ ಮಾಧುರ್ಯದ ನುಡಿನೆಲೆಗೋರೊರ್ಮೆ ಸಂದಿರ್ದ ಕಾಮೋ
ತ್ಸಾಹಕ್ಕೊರ್ಕೇರೊರ್ಮೆ ಮೆಯ್ವೆರ್ಚಿದವಿದ ಮದಕೋರೊರ್ಮೆ ಪೆರ್ಚಿರ್ದ ಲೋಭ
ವ್ಯೂಹಕ್ಕೊರ್ಕೇರೊರ್ಮೆ ಕೋಪೋನ್ನತಿಯನುಮತಿಗೋರೊರ್ಮೆ ಮೆಯ್ವೆರ್ಚಿ ಮದ್ದೇ
ಹೋಹಂ ಎಂದೆಂಬುದಂ ಮಾಣಿಸು ಮನಕವಿದೊಂದಂ ವಿರೂಪಾಕ್ಷಲಿಂಗ

ನವನಿಧಿ ಭಾರ ಪುಣ್ಯನಿಧಿ ಬಾರ ಮಹಾನಿಧಿ ಬಾರ ಭಕ್ತರು
ತ್ಸವನಿಧಿ ಬಾರ ಭಾಗ್ಯನಿಧಿ ಬಾರ ಕೃಪಾನಿಧಿ ಬಾರ ಕಾಂತಿಯು
ಧ್ಭವನಿಧಿ ಬಾರ ನಿತ್ಯನಿಧಿ ಬಾರ ಕೃಪಾನಿಧಿ ಬಾರ ಸತ್ಯಸಂ
ಭವನಿಧಿ ಬಾರ ತತ್ತ್ವನಿಧಿ ಬಾರೆಲೆ ಬಾರೆಲೆ ಹಂಪೆಯಾಳ್ದನೇ

ಹರಿಹರ ಕರ್ಮದೊಳ್ ಬಳಲದಿಂತು ಬರ್ದುಕಿದೆನ್ನೈ ಸದಾಶಿವಾ
ನರಪರ ಸೇವೆಯೊಳ್ ಕುದಿಯದಿಂತು ಬರ್ದುಂಕಿದೆನ್ನೈ ಮಖಾರಿ ಅ
ಸ್ಥಿರ ಸರದೈವದೊಳ್ ತೊಡರದಿಂತು ಬರ್ದುಂಕಿದೆನ್ನೈ ಮಹೇಶ ! ಮ
ದ್ಗುರುವೆ ಪುರಾರಿ ! ಪೂಜ್ಯನೆ ನಿಜಾಂಘ್ರಿಗೆ ಸಾರ್ದೆಲೆ ಹಂಪೆಯಾಳ್ದನೇ

ಹರನಂ ಶಂಕರನಂ ಶಶಾಂಕಧರನಂ ಕಾಪಾಲಿಯಂ ಕಾಲಸಂ
ಹರನಂ ಶೂಲಿಯನೀಶನಂ ಗಿರಿಶನಂ ಭಾಳಾಕ್ಷನಂ ನೀಲಕಂ
ಧರನಂ ಭರ್ಗನನುಗ್ರಹನಂ ಪರಮನಂ ಸರ್ವಜ್ಞನಂ ಶಂಭುವಂ
ಗಿರಿಜಾವಲ್ಲಭನಂ ಮನೋಜಹರನಂ ಕಂಡೆಂ ವಿರೂಪಾಕ್ಷನಂ

ಎನ್ನಾನಂದಸುಧಾಬ್ಧಿವರ್ಧನಕಳಾಸಂಪನ್ನನಂ ಚೆನ್ನನಂ
ಮುನ್ನಾರುಂ ನೆಱೆ ಕಾಣಬಾರದ ಲಸತ್ ಕಾಪಾಲಿಯಂ ಶೂಲಿಯಂ
ಭಿನ್ನಾಭಿನ್ನಮೆನಲ್ಕೆ ಬಾರದ ಮಹಾನಿಸ್ಸೀಮನಂ ಭೀಮನಂ
ಚೆನ್ನಂಗಂದುಱೆ ತನ್ನವಿನಿತ್ತ ವಿಭುವಂ ಕಂಡೆಂ ವಿರೂಪಾಕ್ಷನಂ

ಆನಂದಾಮೃತವಾರ್ಧಿಯಂ ಕೃಪೆಯೊಳೆನ್ನಂ ತೊಳ್ತುಗೊಂಡಾಳ್ದನಂ
ನಾನಾದೇವ ಕಿರೀಟಕೋಟಿ ವಿಲಸತ್ಪಾದಾಬ್ಜನಂ ಭೃತ್ಯಸಂ
ತಾನಾಂಬೋಧಿ ಸುಧಾಂಶುವಂ ದುರಿತ ಘೋರಧ್ವಾಂತ ಮಾರ್ತಾಂಡನಂ
ಭಾನುಜ್ಯೋತಿಗತರ್ಕ್ಯಕಾಂತಿಯುತನಂ ಕಂಡೆಂ ವಿರೂಪಾಕ್ಷನಂ

ಪೆಱತೊಂದಂ ನುಡಿಯಂ ಪ್ರಪಂಚರಹಿತಂ ಕಾರ್ಪಣ್ಯಮ್ಯಂ ಮಾಡನೊ
ಲ್ದಿಱಗಂ ಕಾಮದ ಬಟ್ಟೆಯತ್ತಲೆಳಸಂ ತರ್ಕಕ್ಕೆ ಮಾತ್ಸರ್ಯವೆಂ
ದಱಿಯಂ ಲೋಕದ ಮಾನವರ್ಗೆ ಮಣಿಯಂ ಸದ್ಭಕ್ತ ಸತ್ಸಂಗಮಂ
ತೊಱೆಯಂ ಸತ್ಯಮನಲ್ಲದಾಡನಚಲಂ ಭಕ್ತಂ ವಿರೂಪಾಕ್ಷನಾ

ನಿರಪೇಕ್ಷಂ ಕರುಣಾಕರಂ ಸುಖಮಯಂ ಶಾಂತಂ ಮಹೋತ್ಸಾಹಿ ಭ
ಕ್ತಿರತಂ ಮಂಗಳಮೂರ್ತಿ ಲಿಂಗಸುಲಭಂ ಸಂತೋಷಿ ಸತ್ಯಂ ವಿಮ
ತ್ಸರನುರ್ವೀಜನವಂದ್ಯನುನ್ನತನನೇಕಾಶ್ಚರ್ಯಯುಕ್ತಂ ಮಹೇ
ಶ್ವರನಾತಂಗರಿದುಂಟೆ ಹಂಪೆಯ ವಿರೂಪಾಕ್ಷ ಪ್ರಸಾದಾನ್ವಿತಂ

ಮನೆ ನೆಳಲಾಗೆ ಪೆಂಡಿರಿನಿದಾಗೆ ಸುತರ್ ಪಿರಿದಾಗೆ ಅರ್ಥದಾ
ರ್ಜನೆ ಘನವಾಗೆ ಯೌವನಮುದಾಗೆ ಬಳಿಕ್ಕದನೇನನೆಂದಪೆಂ
ತನತನಗುಬ್ಬುತಂಕುರಿಸುತುಂ ನೆಱೆ ಪಲ್ಲವಿಸುತ್ತೆ ಪರ್ವುತುಂ
ನನೆಕೊನೆವೋಗಿ ಮಾಯೆ ಕೊಱಚಾಡದೆ ಮಾಣ್ಬಳೆ ಹಂಪೆಯಾಳ್ದನೇ

ನರರಂ ಸೇವಿಪ ಜೀಯ ಜೀಯೆನುತುಮಿರ್ಪೇನೆಂದೊಡಂ ದೈನ್ಯಮು
ಬ್ಬರಿಸುತ್ತುಂ ತನುಗುಂದಿಯುಂ ತನಗೆ ತಾನೆಂತಕ್ಕೆಯುಂ ಬೇಡುತಿ
ರ್ಪಿರವಂ ಸುಟ್ಟು ಭಕ್ತಿಯೊಳಗೋಲಾಡಲ್ ಮನಂದಂದು ಶಂ
ಕರನಂ ಶಾಶ್ವತನಂ ಕೃಪಾಜಲಧಿಯಂ ಕಂಡೆಂ ವಿರೂಪಾಕ್ಷನಂ

ಪೋಗೆನೆ ಪೋಪ ಬಾರೆಲವೊ ಬಾರೆನೆ ಜೀಯ ಹಸಾದವೆಂದು ಬೆ
ಳ್ಳಾಗುತೆ ಬರ್ಪ ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ ಮ
ತ್ತಾಗಳೆ ಬಗ್ಗಿಸಲ್ ನಡುಗಿ ಬೀಳುವ ಸೇವಿಪ ಕಷ್ಟವೃತ್ತಿಯಂ
ನೀಗಿದೆನಿಂದು ನಿಮ್ಮ ದಯೆಯಿಂ ಕರುಣಾಕರ ಹಂಪೆಯಾಳ್ದನೇ

ಸಡಿ ಫಡ ಮಾನವರ್ ಕುಡುವರೆಂಬುದನಾಡದಿರೆನ್ನ ಮುಂದೆ ಕ
ಷ್ಪಡದ ಶರೀರಗಳ್ ತೃಣದ ಹಾಪೆಗಳಕ್ಕಟ ! ಮಣ್ಣ ಬೊಂಬೆಗಳ್
ಕುಡುವುವೆ ಬೇಡು ಬೇಡಿದುದನೀವ ಮಹಾನಿಧಿಯಂ ಮಹೇಶನಂ
ಮೃಡನನನೂನದಾನಿಯನಲಂಪಿನ ಪೆಂಪಿನ ಹಂಪೆಯಾಳ್ದನಂ

## ೧೧. ಚಾಮರಸ : ಅಲ್ಲಮಪ್ರಭುವಿನ ಕರುಣೆ

ದೀನ ಮನದವನಂತೆ ಕಂಡ ನಿ
ಧಾನವನು ತಾನೊಬ್ಬನುಂಬನೆ
ದಾನಿ ಲೇಸೈ ನಿನ್ನ ಪರಿ ನೀ ಕಂಡ ಶಿವಪಥವ
ಮಾನವರಿಗಱುಹೆಂಬ ಮಹದಭಿ
ಮಾನಿ ನೀನೇ ಜಗದ ಗುರುವೆಂ
ದಾನಿರುಪಮನನಲ್ಲಮನ ಹೊಗಳಿದನು ಗೊಗ್ಗಯ್ಯ

ಕೇಳಿದಾ ಶಿಶುಗಳಿಗೆ ಮಿಗೆ ಮೊಲೆ
ವಾಲೆ ಜೀವನವಾಡಿಡೆಯು ಎಱೆ
ವಾಲನೆಱೆವುತ ಮೆಲ್ಲಮೆಲ್ಲನೆ ಅಶನವುಣಕಲಿಸಿ

ಬಾಲಕರ ಪಟುಮಾಡಬಲ್ಲ ಸ
ಕೀಲಕದವೊಲು ಹೊಱಗ ಮಱೆದು ನಿ
ರಾಳದಲಿ ನಿಲಲಱಿವುದಾ ಮುಕ್ತಾಯಿ ಕೇಳೆಂದ

*   *   *

ಚಿಂತಿತಾರ್ಥವನಖಿಳ ಭಕ್ತರ
ತಿಂತಿಣಿಗೆ ಕೊಡುತಲ್ಲಮಪ್ರಭು
ಸಂತಸದಲಿರುತಿರ್ದನೆಲ್ಲರ ಹೃದಯಕಮಲದಲಿ

ಬಾಲರನು ವೃದ್ಧರನು ಭೂಮೀ
ಪಾಲರನು ಬಡವರನು ಸದಮಲ
ಶೀಲರನು ಗುಣಿಗಳನು ಗೋಬ್ರಾಹ್ಮರನು ಭಕ್ತರನು
ಲೋಲತೆಯಲಿ ಸಮಸ್ತ ಜಾತಿಯ
ಜಾಲವನು ಸರ್ವರನು ಕರುಣಿಸಿ
ಪಾಲಿಸುತಲಿರುತಿರ್ದನೆಮ್ಮಯ ಗುರು ಗುಹೇಶ್ವರನು

## ೧೨. ಷಡಕ್ಷರಿ : ಶಿವಪೂಜೆ

ಅನಂತರಮಾಭೂಮಿಪಲಲಾಮಂ ಮರಂದದೊಳ್ ಮುಳುಂಗುವ ಮಧುಕರನಂತೆ ಪರಿಮಳೋದಕದಿಂ ಜಳಕಂಬೊಕ್ಕು, ಶಾರದಾಭ್ರಂ ತಳ್ತ ಶಶಾಂಕನೆನಿಸಿ ಬೆಳ್ಪಟ್ಟೆಯಂ ಪೊದೆದುಟ್ಟು, ಶಶಿಕಳೆಯಂ ತುಳಿವ ಕೆಂದಾವರೆಯೆನಿಸಿ ಪದತಳದಿಂ ಪಳಿಕುವಾವುಗೆಯಂ ಮೆಟ್ಟಿ, ಪಾಲ್ಗಡಲ ಪೆರ್ದೆರೆಯೊಳ್ ಪುಗುವ ಮರಾಳನಂತೆ ಶಶಿಕಾಂತರಚಿತಮಾದ ಪೂಜಾಗಾರಮಂ ಪೊಕ್ಕರ್ಚನೋಚಿತಾಸರದೊಳುತ್ತರಾಭಿಮುಖಂ ಪ್ರಸನ್ನ ಮುಖಂ ಪದ್ಮಾಸನಮನವಷ್ಟಂಭಿಸಿ ಋಜುಭಾವದಿಂ ಕುಳ್ಳಿರ್ದು

ಘನ ಸದ್ಯೋಜಾತ ಮುಖ್ಯ ಪ್ರಭವ ಮಹಿಮುಖೋತ್ಪನ್ನ ಸಂಪನ್ನಿವೃತ್ತ್ಯಾದಿ ನಿಯುಕ್ತೋತ್ಪತ್ತಿ ಭಾಸ್ವದ್ಗಣಯುತ ಕಪಿಲಾದ್ಯ ಪ್ರಭೂತಾವನೀ ಪಾವನರೂಪ ಶ್ರೀ ವಿಭೂತಿ ಪ್ರಭೃತಿಯನುರೆ ಪತ್ಪೂರ್ವಕಂ ಲೇಪನಂ ಗೆಯ್ದು ನಿತಾಂತಂ ತತ್ರಿಪುಂಡ್ರಂ ತೊಳಗೆ ತಳೆದು ವಿಧ್ಯುಕ್ತ ಮಂತ್ರಂಗಳಿಂದಂ

ಶಿವನೇತ್ರಾಂಭೋಜಮಂ ಪೂಜಿಸಿ ಸದಮಳ ರುದ್ರಾಕ್ಷಮಂ ಭಕ್ತಿಯಿಂದುಕ್ತ ವಿಧಾನಂದಪ್ಪುದಾ ತಾಣದೊಳೆ ಗಣನೆಯಂ ಮೀರದೋರಂತೆ ತಾಳ್ದೊಪ್ಪುವ ಹೃತ್ಪಂಕಜದೊಳ್ ಜಾನಿಸಿದನಿನಘನದ್ಯೋತಿಯಂ ಸಾಂಬನಂ ಶಂಭುವನಿಂದ್ವರ್ಧಾಂಕ ಕೋಟೀರನನನಘನನಾನಂದದಿಂ ತನ್ನೃಪಾಲಂ

ಅಂತು ಜಾನಿಸಿ ಜಲಕ್ಕನೆ ತೊಳಪ ಮೂರ್ತಿಯನೊಳಗೆ ಕಂಡು ಕರಣಂಗಳ ಕಳೆಯೇರೆ ಮಾನವೇಶ್ವರಂ ಮಾನಸಪೂಜೆಯುಂ ರಚಿಸಿ, ಬಾಹ್ಯಪೂಜೆಗೆ ಮನಂ ದಂದು ನಿಜೇಷ್ಟಲಿಂಗವುಂ ಕರಾಬ್ಜಪೀಠದೊಳ್ ನೆಲೆಗೊಳಿಸಿ ನಿರ್ನಿಮೇಷಾಕ್ಷಿಯಿಂ ನಿರೀಕ್ಷಿಸಿ

ಹೃದಯದೊಳೆ ಜಾನಿಸಿದ ಪರಿ
ಜದು ನಿಜಲಿಂಗದೊಳಭಿನ್ನಮೆನಿಸಿರೆ ಕಂಡೇಂ
ಮುದವಾಂತನೊ ನರಪತಿ ಬಗೆ
ಗೊದವಿದುಪದು ತೋರೆ ಪೊರೆಗೆ ಸುಖಿಸದರೊಳರೇ

ಇದು ಮುನಿಗಳ ಮನದೊಳಬೆಳ
ಗಿದು ವಿಧಿ ವಿಷ್ಣುಗಳ ವಾದಮಂ ಮಾಣಿಸಿದ
ಗ್ಗದ ಪರಬೊಮ್ಮಂ ತಾನಿಂ
ತಿದು ಮೋಕ್ಷಾಮಳಫಳಪ್ರದಂ ಸುರಭೂಜಂ

ಎಂದು ಕಣ್ದೀವಿ ನೋಡಿ, ಮನಂದೀವಿ ನೆನೆದು, ಭಾವಂದೀವಿ ಭಾವಿಸಿ, ಮತ್ತೆ ಮತ್ತೆ ಮಾಣದೆ

ಸುರಿವ ಮುದಶ್ರುವೆ ಚಳೆಯಂ
ಶರೀರದೊಳ್ ಮೊಳೆವ ಪುಳಕವೇ ಗುಡಿ ಲಾಸ್ಯಂ
ಕರಕಂಪಂ ಗದ್ಗದರುತಿ
ವರವಾದ್ಯಮದಾಗೆ ಶಿವನನವನಿದಿರ್ಗೊಂಡಂ

ಅಂತಿದಿರ್ಗೊಂಡು

ಶ್ರುತಿಸತಿಯ ಶಿರೋಮಣಿ ಯತಿ
ಪತಿಗಳ ಹೃದಯಾಬ್ಜ ದಿವ್ಯ ದಿನಮಣಿ ನತಸಂ
ತತಿ ಚಿಂತಾಮಣಿ ಭುವನ
ಸ್ತುತಲಿಂಗಂ ತಾನಿದೆಂದು ಪೊಗಳ್ದಂ ಭೂಪಂ

ನಿರ್ವ್ಯಾಜ ಭಕ್ತಿಯಿನಿಂತು ಪೊಗಳ್ದನಂತರಂ ಪುರುಷಪುಂಗವಂ ಪುಂಗವ ಧ್ವಜಂಗಾತ್ಮಾರ್ಪಣಂಗೆಯ್ದಿನಿಸಾನುಂ ಪೊಳ್ತನಿಮಿಷಾಕ್ಷಿಯಿಂ ನಿರೀಕ್ಷಿಸಿ

ಪಳಿಕುಗೊಡದೊಳಗೆ ಪೊರಗು
ಜ್ವಳಿಪಂತಜ್ಯೋತಿಯಂತಿರೊಳಗಂ ಪೊರಗಂ
ಬೆಳಪ ಮನೋಮಧ್ಯ ಸಮು
ಜ್ವಳಲಿಂಗಮನರಸನಳ್ಕರಿಂ ಜಾನಿಸಿದಂ

ಅಣಿಯರಮಭವನ ಸುಗುಣಮ
ನೆಣಿಪಂತಿರೆ ನಚ್ಚಿ ಮಚ್ಚಿ ತನ್ಮಹಿಮೆಗಳಂ
ಗುಣಿಪಂತಿರೆ ಜನಪಾಲಾ
ಗ್ರಣಿ ಪಂಚಾಕ್ಷರಮನವಮ ಜಪಿಸಿದನಾಗಳ್

## ೧೩. ದಾಸರ ಪದಗಳು

### ಪುರಂದರ ದಾಸರು

### ಸುಮಾರು ಕ್ರಿ. ಶ. ೧೫೪೦

೧

ಈ ಪರಿಯ ಸೊಬಗಾವ ದೇವರಲಿ ಕಾಣೆ
ಗೋಪೀಜನಪ್ರಿಯ ಗೋಪಾಲಗಲ್ಲದೆ ||ಪ||

ದೊರೆಯತನದಲಿ ನೋಡೆ ಧರಣಿದೇವಿಗೆ ರಮಣ
ಸಿರಿಯತನದಲಿ ನೋಡೆ ಶ್ರೀಕಾಂತನು
ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ
ಗುರುವತನದಲಿ ನೋಡೆ ಜಗದಾದಿ ಗುರುವು

ಪಾವನತ್ವದಿ ನೋಡೆ ಅಮರಗಂಗಾಜನಕ
ದೇವತ್ವದಲಿ ನೋಡೆ ದಿವಿಜರೊಡೆಯ
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ
ಆವ ಧೈರ್ಯದಿ ನೋಡೆ ಅಸುರಾಂತಕ

ಗಗನದಲಿ ಸಂಚರಿಪ ಗರುಡದೇವನೆ ತುರಗ
ಜಗತೀಧರ ಶೇಷ ಪರಿಯಂಕಶಯನ
ನಿಗಮಗೋಚರ ಪುರಂದರ ವಿಠಲಗಲ್ಲದೆ
ಮಿಗಿಲಾದ ದೈವಗಳಿಗೀ ಭಾಗ್ಯವುಂಟೇ

೨

ಬಿನ್ನಹಕೆ ಬಾಯಿಲ್ಲವಯ್ಯಾ
ಅನಂತ ಅಪರಾಧ ಎನ್ನಲ್ಲಿ ಇರಲಾಗಿ

ಶಿಶುಮೋಹ ಸತಿಮೋಹ ಜನನಿಜನಕರಮೋಹ
ರಸಿಕ ಮಿತ್ರರಮೋಹ ರಾಜಮೋಹ
ಪಶುಮೋಹ ಭೂಮೋಹಬಂಧುವರ್ಗದ ಮೋಹ
ಅಸುರಾರಿ ನಿನ್ನ ಮರತೆನೋ ಕಾಯೋ ಹರಿಯೇ

ಅನ್ನಮದ ಅರ್ಥಮದ ಅಖಿಲವೈಭವದ ಮದ
ಮುನ್ನ ಪ್ರಾಯದ ಮದವು ರೂಪಮದವು
ತನ್ನ ಸತ್ವದ ಮದ ಧಾತ್ರಿವಶವಾದ ಮದ
ಇನ್ನು ತನಗೆದುರಿಲ್ಲವೆಂದೆಂಬ ಮದದಿಂದ

ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಸೆ
ಅಷ್ಟು ದೊರಕಿದರು ಮತ್ತಷ್ಟರಾಸೆ
ಕಷ್ಟ ಬೇಡೆಂಬಾಸೆ ಕಡುಸುಖವ ಕಾಂಬಾಸೆ
ನಷ್ಟ ಜೀವನದಾಸೆ ಪುರಂದರವಿಠಲ

೩

ಉದರವೈರಾಗ್ಯವಿದು ನಮ್ಮ
ಪದುಮನಾಭನಲಿ ಲೇಶ ಭಕುತಿಯಿಲ್ಲ

ಉದಯಕಾಲದಲೆದ್ದು ಗಡಗಡ ನಡುಗುತ
ನದಿಯೊಳು ಮಿಂದೆವೆಂದು ಹೇಳುತಲಿ
ಮದ ಮತ್ಸರ ಮೋಹ ಒಳಗೆ ತುಂಬಿಟ್ಟುಕೊಂಡು
ಬದಿಯಲಿದ್ದವರಿಗಾಶ್ಚರ್ಯತೋರುವುದು

ಕಂಚುಗಾರರಾ ಅಂಗಡಿಯಂದದಿ
ಕಂಚು ಹಿತ್ತಾಳೆಯ ಪ್ರತಿಮೆಯ ನೆರಹಿ
ಮಿಂಚಲೆನುತೆ ಬಹು ಜ್ಯೋತಿಗಳನೆ ಹಚ್ಚಿ
ವಂಚನೆಯಲಿ ಘನಪೂಜೆ ಮಾಡುವುದು

ಕರದೊಳು ಜಪಮಣಿ ಬಾಯೊಳು ಮಂತ್ರವು
ಅರಿವೆಯ ಮುಸುಕನು ಮೋರೆಗೆ ಹಾಕಿ
ಪರಸತಿ ಪರಧನಕಾಗಿ ಚಿಂತಿಸುತೆ
ಪರಮವೈರಾಗ್ಯದ ಮೂರ್ತಿಯೆನಿಸುವುದು

ಬೂಟಕತನದಲಿ ಬಹಳ ಬಕುತಿಮಾಡಿ
ನೋಟಕೆ ಇವನಿಗೆ ಸರಿಯಿಲ್ಲೆನಿಸಿ
ನಾಟಕ ಸ್ತ್ರೀಯಂತೆ ಬಯಲ ಡಂಬವ ತೋರೆ
ಊಟದ ಮಾರ್ಗದ ಜ್ಞಾನವಿಲ್ಲದೆ

ನಾನು ಎಂಬುದ ಬಿಟ್ಟು ಜ್ಞಾನಿಗಳೊಡಗೂಡಿ
ಏನೆಲ್ಲಕೆ ದೇವಪ್ರೇರಣೆಯೆಂದು
ಧ್ಯಾನಿಸಿ ಮೌನದಿ ಪುರಂದರ ವಿಠಲನ
ಕಾಣದೆ ಮಾಡಿದ ಕಾರ್ಯಗಳೆಲ್ಲವು

೪

ಹುಚ್ಚು ಹಿಡಿಯಿತು ಎನಗೆ ಹುಚ್ಚು ಹಿಡಿಯಿತು
ಅಚ್ಯುತನ ನಾಮವೆಂಬ ಮೆಚ್ಚು ಮದ್ದು ತಲೆಗೆ ಏರಿ ||ಪ||

ವಾಸುದೇವನೆಂಬ ನಾಮ ವದನದಲ್ಲಿ ಒದರುವೆ ಮಾಯಾ
ಪಾಶವೆಂಬ ಅಂಗಿಯನ್ನು ಹರಿದು ಹರಿದು ಬಿಸುಡುವೆ
ಕ್ಲೇಶವೆಂಬ ಮುಡಿದ ಹೂವ ಕಿತ್ತು ಕಿತ್ತು ಬಿಸುಡುವೆ ಕೆಟ್ಟ
ದೋಷವೆಂಬ ಗೋಡೆಯನ್ನು ಕೆರೆದು ಕೆರೆದು ಹಾಕುವಂಥ

ಕೃಷ್ಣನಂಘ್ರಿ ಕಮಲಕೆರಗಿ ಸೊರಗಿ ಸೊರಗಿ ಬೀಳುವೆ ಎನ್ನ
ಕಷ್ಟವೆಂಬ ಕುಂಭವನ್ನು ಒಡೆದು ಒಡೆದು ಹಾಕುವೆ
ನಿಷ್ಠರನ್ನು ಕಂಡರವರ ಹಿಂದೆ ಹಿಂದೆ ತಿರುಗುವೆ ಸಲೆ
ದುಷ್ಟರನ್ನು ಕಂಡ ಕಡೆ ಕಲ್ಲು ಬೀಸುವಂಥ

ಮಂದಮತಿಗಳನ್ನು ಕಂಡರೆ ಮೂಕನಾಗುವೆನು ಹರಿಯ
ನಿಂದೆ ಮಾಡುವವರ ಮೇಲೆ ಮಣ್ಣು ತಂದು ಚೆಲ್ಲುವೆ
ತಂದೆ ಸಿರಿ ಪುರಂದರ ವಿಠಲನ ಪಾದವನ್ನು
ಹೊಂದಿಸುವ ಜನರ ಸೇರಿ ಹಾಡಿ ಹಾಡಿ ಕುಣಿಯುವಂಥ

೫

ಮಾನವಜನ್ಮ ದೊಡ್ಡದು ಇದ
ಹಾನಿ ಮಾಡಲುಬೇಡಿ ಹುಚ್ಚಪ್ಪಗಳಿರ ||ಪ||

ಕಣ್ಣು ಕೈಕಾಲ್ ಕಿವಿ ನಾಲಗೆ ಇರಲಿಕ್ಕೆ
ಮಣ್ಣುಮುಕ್ಕಿ ಮರುಳಾಗುವರೆ
ಹೆಣ್ಣು ಮಣ್ಣಿಗಾಗಿ ಹರಿಯ ನಾಮಾಮೃತ
ಉಣ್ಣದೆ ಉಪವಾಸ ಇರುವರೆ ಖೋಡಿ

ಕಾಲನ ದೂತರು ಕಾಲ್ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೆ
ದಾಳಿ ಬಾರದ ಮುನ್ನ ಧರ್ಮವ ಗಳಿಸಿರೊ
ಸುಳ್ಳಿನ ಸಂಸಾರಸುಳಿಗೆ ಸಿಕ್ಕಲು ಬೇಡಿ

ಏನುಕಾರಣ ಯದುಪತಿಯನ್ನು ಮರೆತಿರಿ
ಧನ ಧಾನ್ಯ ಪುತ್ರರು ಕಾಯುವರೆ
ಇನ್ನಾದರು ಏಕೋಭಾವದಿ ಭಜಿಸಿರೊ
ಚೆನ್ನ ಶ್ರೀ ಪುರಂದರ ವಿಠಲರಾಯನ

೬

ಬೇವುಬೆಲ್ಲದೊಳಿಡಲೇನು ಫಲ
ಹಾವಿಗೆ ಹಾಲೆರೆದೇನು ಫಲ ‖ ಪ ‖

ಕುಟಿಲವ ಬಿಡದಿಹ ಕುಜನರು ಮಂತ್ರವ
ಪಠನೆಯ ಮಾಡಿದರೇನು ಫಲ
ಸಟೆಯನ್ನಾಡುವ ಮನುಜರು ಸಂತತ
ನಟನೆಯ ಮಾಡಿದರೇನು ಫಲ

ಕಪಟತನದಲಿ ಕಾಡುತ ಜನರನು
ಜಪವನು ಮಾಡಿದರೇನು ಫಲ
ಕುಪಿತತನವನು ಬಿಡದೆ ನಿರಂತರ
ಉಪವಾಸ ಮಾಡಿದರೇನು ಫಲ

ಮಾತಾಪಿತರನು ಬಳಲಿಸಿದಾತನು
ಯಾತ್ರೆಯ ಮಾಡಿದರೇನು ಫಲ
ಘಾತಕತನವನು ಬಿಡದೆ ನಿರಂತರ
ಗೀತೆಯನೋದಿದರೇನು ಫಲ

ಪತಿಗಳ ನಿಂದಿಪ ಸತಿಯರು ಬಹು ವಿಧ
ವ್ರತಗಳ ಮಾಡಿದರೇನು ಫಲ
ಅತಿಥಿಗಳೆಡೆಯಲಿ ಭೇದವ ಮಾಡುತ
ಗತಿಯನು ಬಯಸಿದರೇನು ಫಲ

ಹೀನಗುಣಂಗಳ ಹಿಂಗದೆ ಗಂಗೆಯ
ಸ್ನಾನವ ಮಾಡಿದರೇನು ಫಲ
ಶ್ರೀನಿಧಿ ಪುರಂದರ ವಿಠಲನ ನೆನೆಯದೆ
ಮೌನವ ಮಾಡಿದರೇನು ಫಲ

೭

ಕಂಡು ಕಂಡು ಎನ್ನ ಕೈ ಬಿಡುವರೇ
ಪುಂಡರೀಕಾಕ್ಷ ಪುರುಷೋತ್ತಮ ದೇವ || ಪ ||

ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ
ನಿಂದೆಯಲಿ ನೊಂದೆನ್ನೆ ನೀರಜಾಕ್ಷ
ತಂದೆತಾಯಿಯು ನೀನೆ ಬಂಧು ಬಳಗವು ನೀನೆ
ಎಂದೆಂದಿಗೂ ನಿನ್ನ ನಂಬಿದೆನೊ ಕೃಷ್ಣ

ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ
ಎಣಿಸಲಾರದ ಭವದಿ ನೊಂದೆ ನಾನು
ಸನಕಾದಿ ಮುನಿವಂದ್ಯ ವನಜಸಂಭವನ ಪಿತ
ಫಣಿಶಾಯಿ ಪ್ರಹ್ಲಾದವರದ ಶ್ರೀಕೃಷ್ಣ

ಭಕ್ತವತ್ಸಲನೆಂಬೊ ಬಿರುದು ಪೊತ್ತಮೇಲೆ
ಭಕ್ತರಾಧೀನನಾಗಿರಬೇಡವೆ
ಮುಕ್ತಿದಾಯಕ ದೇವ ಪುರಂದರ ವಿಠಲನೆ
ಶಕ್ತ ನೀನಹುದೆಂದು ನಂಬಿದೆನೊ ಕೃಷ್ಣ

೮

ಅನುಭವದಡಿಗೆಯ ಮಾಡಿ ಅದ
ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ || ಪ ||

ತನುವೆಂಬ ಭಾಂಡವ ತೊಳೆದು ಕೆಟ್ಟ
ಮನದ ಚಂಚಲವೆಂಬ ಮುಸುರೆಯ ಕಳೆದು
ಘನವಾಗಿ ಮನೆಯನ್ನು ಬಳಿದು ಅಲ್ಲಿ
ಮಿನುಗುವ ತ್ರಿಗುಣದ ಒಲೆಗುಂಡನೆಡೆದು

ವಿರಕ್ತಿಯೆಂಬೊ ಮಡಿಯುಟ್ಟು ಪೂರ್ಣ
ಹರಿಭಕ್ತಿಯೆಂಬ ನೀರನ್ನೆಸರಿಟ್ಟು
ಅರಿವೆಂಬ ಬೆಂಕಿಯ ಪೊಟ್ಟು ಮಾಯಾ
ಮರವೆಂಬ ಕಾಷ್ಠವ ಮುದದಿಂದ ಸುಟ್ಟು

ಕರುಣೆಯೆಂಬೊ ಸಾಮುಗ್ರಿ ಹೂಡಿ ಮೋಕ್ಷ
ಪರಿಕರವಾದಂಥ ಪಾಕವ ಮಾಡಿ
ಗುರುಶರಣರು ಸವಿದಾಡಿ ನಮ್ಮ
ಪುರಂದರ ವಿಠಲನ ಬಿಡದೆ ಕೊಂಡಾಡಿ

೯

ಎನಗೂ ಆಣೆ ರಂಗ ನಿನಗೂ ಆಣೆ
ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ ॥ ಪ ॥

ನಿನ್ನ ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ ರಂಗ
ಎನ್ನನೀ ಕೈಬಿಟ್ಟು ಪೋದರೆ ನಿನಗೆ ಆಣೆ
ತನು ಮನ ಧನದಲ್ಲಿ ವಂಚಕನಾದರೆ ಎನಗೆ ಆಣೆ ರಂಗ
ಮನಸು ನಿನ್ನಲಿ ನಿಲಿಸದಿದ್ದರೆ ನಿನಗೆ ಆಣೆ
ಕಾಕುಮನುಜರ ಸಂಗವ ಮಾಡಿದರೆನಗೆ ಆಣೆ ರಂಗ
ಲೌಕಿಕವ ಬಿಡಿಸದಿದ್ದರೆ ನಿನಗೆ ಆಣೆ
ಶಿಷ್ಟರ ಸಂಗವ ಮಾಡದಿದ್ದರೆ ಎನಗೆ ಆಣೆ ರಂಗ
ದುಷ್ಟರ ಸಂಗವ ಬಿಡಿಸದಿದ್ದರೆ ನಿನಗೆ ಆಣೆ
ಹರಿ ನಿನ್ನಾಶ್ರಯ ಮಾಡದಿದ್ದರೆ ಎನಗೆ ಆಣೆ ರಂಗ
ಪುರಂದರ ವಿಠಲ ನೀನೊಲಿಯದಿದ್ದರೆ ನಿನಗೆ ಆಣೆ

೧೦

ಈಸಬೇಕು ಇದ್ದು ಜೈಸಬೇಕು
ಹೇಸಿಕೆ ಸಂಸಾರದಲ್ಲಿ ಆಶಾಲೇಶವಾಡದಂತೆ ॥ ಪ ॥

ತಾವರೆಯು ಜಲದಂತೆ ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮನೆನುತ ಪಾಡಿ ಕಾಮಿತ ಕೈಕೊಂಬರೆಲ್ಲ

ಗೇರುಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ
ಮೀರಿ ಆಸೆ ಮಾಡದಂತೆ ಧೀರ ಕೃಷ್ಣನ ನೆನೆವರೆಲ್ಲ

ಮಾಂಸದಾಸೆಗೆ ಮತ್ಸ್ಯ ಸಿಲುಕಿ ಹಿಂಸೆಪಟ್ಟ ಪರಿಯಂತೆ
ಮೋಸಹೋಗದಂತೆ ಜಗದೀಶ ಪುರಂದರ ವಿಠಲನೆನುತ

## ಕನಕದಾಸರು

### ಸುಮಾರು ಕ್ರಿ. ಶ. ೧೫೫೦

೧

ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ಪ ॥

ಬೆಟ್ಟದಾ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ
ಘಟ್ಟಿಯಾಗಿ ಸಲಹುವನು ಇದಕೆ ಸಂಶಯ ಬೇಡ

ಅಡವಿಯೊಳಾಡುವ ಮೃಗಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರೊ
ಪಡೆದ ಜನನಿಯ ತೆರದೆ ಸ್ವಾಮಿ ಹೊಣೆಗೀಡಾಗಿ
ಬಿಡದೆ ರಕ್ಷಿಪನಿದಕೆ ಸಂದೇಹ ಬೇಡ

ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರವಿತ್ತವರು ಯಾರೊ
ಬಲ್ಲಿದನು ಕಾಗಿನೆಲೆಯಾದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ

೨

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ
ನೀ ದೇಹದೊಳಗೊ ನಿನ್ನೊಳು ದೇಹವೊ ॥ ಪ ॥

ಬಯಲು ಆಲಯದೊಳಗೊ ಆಲಯವು ಬಯಲೊಳಗೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯೊಳಗೊ ಬುದ್ಧಿ ನಯನದೊಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ

ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆ ಮನಸಿನೊಳಗೊ ಮನಸು ಜಿಹ್ವೆಯೊಳಗೊ
ಜಿಹ್ವೆ ಮನಸುಗಳೆರಡು ನಿನ್ನೊಳಗೊ ಹರಿಯೆ

ಕುಸುಮದೊಳು ಗಂಧವೋ ಗಂಧದೊಳು ಕುಸುಮವೊ
ಕುಸುಮ ಗಂಧಗಳೆರಡು ಘ್ರಾಣದೊಳಗೊ
ಅಸಮಭವ ಕಾಗಿನೆಲೆಯಾದಿಕೇಶವರಾಯ
ಉಸುರಲಿನ್ನಳವಲ್ಲ ಎಲ್ಲ ನಿನ್ನೊಳಗೊ

೩

ಕುಲ ಕುಲ ಕುಲವೆನ್ನುತಿಹರು
ಕುಲ ಯಾವುದು ಸತ್ಯ ಸುಖವುಳ್ಳ ಜನರಿಗೆ ॥ ಪ ॥

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ

ಮೃಗಗಳ ಮೈಯಲ್ಲಿ ಪುಟ್ಟಲು ಕಸ್ತೂರಿ
ತೆಗೆದು ಪೂಸುವರು ದ್ವಿಜರೆಲ್ಲರು
ಒಗೆಯಿಂದ ನಾರಾಯಣನಾವ ಕುಲವಯ್ಯ
ಜಗವಲ್ಲಭನಾವ ಕುಲ ಪೇಳಿರಯ್ಯ

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ ಮಹಾತ್ಮನು ನೆಲೆಯಾದಿಕೇಶವ
ಯಾತರ ಕುಲವಯ್ಯ ಆತನೊಲಿದ ಮೇಲೆ

೪

ದಾನ ಧರ್ಮವ ಮಾಡಿ ಸುಖಿಯಾಗು ಮನವೆ
ಹೀನವೃತ್ತಿಯಲಿ ನೀ ಕೆಡಬೇಡ ಮನವೆ ॥ ಪ ॥

ಎಕ್ಕನಾತಿ ಎಲ್ಲಮ್ಮ ಮಾರಿ ದುರ್ಗಿ ಚೌಡಿ
ಅಕ್ಕರಿಂದಲಿ ಪೂಜೆ ಮಾಡಲೇಕೆ
ಕಿಕ್ಕಿರಿದು ಯಮನ ದೂತರೆಳೆದೊಯ್ವಾಗ
ಶಕ್ತಿಯರು ಬಿಡಿಸಿಕೊಂಡಾರೇನೊ ಮರುಳೆ

ಸಂಭ್ರಮದಲ್ಲೊಂದು ಹೊತ್ತು ನೇಮದಲಿದ್ದು
ತಂಬಿಟ್ಟನಾ ದೀಪ ಹೊರಲೇತಕೆ
ಕೊಂಬು ಹೋತು ಕುರಿ ಕೋಣನಾ ಬಲಿಗೊಂಬ
ದೊಂಬಿ ದೈವಗಳ ಭಜಿಸದಿರು ಮನವೇ

ಚಿಗುರೆಲೆ ಬೇವಿನಸೊಪ್ಪು ನಾರ ಸೀರೆ
ಬಗೆಬಗೆಯಿಂದ ಶೃಂಗಾರಮಾಡಿ
ನೆಗೆನೆಗೆದು ಆಡಲು ಕುಣಿಯಲು ನಿನಗಿನ್ನು
ಮಿಗಿಲಾದ ಮುಕುತಿಯುಂಟೆ ಹುಚ್ಚು ಮನವೆ

ದಾನ ಧರ್ಮ ಪರೋಪಕಾರವ ಮಾಡು
ದೀನನಾಗಿ ನೀ ಕೆಡಬೇಡವೊ
ಜ್ಞಾನವಿಲ್ಲದೆ ಹೀನ ದೈವವ ಭಜಿಸಲು
ಏನುಂಟು ನಿನಗಿನ್ನು ಎಲೆ ಹುಚ್ಚುಮನವೆ

ನರಲೋಕದಿ ಯಮನ ಬಾಧೆಯು ಕಳೆಯಲು
ವರ ಪುಣ್ಯಕಥೆಗಳ ಕೇಳುತಲಿ
ಸಿರಿಯಾದಿಕೇಶವರಾಯನ ನೆರೆ ನಂಬಿ
ಸ್ಥಿರವಾದ ಪದವಿಯ ಪಡೆ ಹುಚ್ಚು ಮನವೆ

## ೧೪. ಚಿಕದೇವರಾಜ

### ಕ್ರಿ.ಶ. ೧೬೭೨—೧೭೦೪

### ಬಿನ್ನಪ

ಒಂದು ದೆಸೆಯೊಳ್ ತುರುಕರೊಂದು ಕಡೆಯೊಳ್ ಮೊಬಿಸ
ರೊಂದೆಸೆಯೊಳಾರೆಯರ ಬಿಂದಮುಳವಿಂ ಬೇ

ಱಿಕೊಂದು ಬಳಿಯೊಳ್ ತಿಗುಳರೊಂದಿರವಿನೊಳ್ ಕೊಡಗ
ರೊಂದು ಕೆಲದೊಳ್ ಮರವರೊಂದುವೆರೆದೆಲ್ಲರ್
ಸಂದಣಿಸಿ ಕಾಳಗಕೆ ಮುಂದುವರಿವನ್ನಮದ
ಟಿಂದವರ ತಟ್ಟುಗಳ ಪಂದಲೆಗಳಂ ದಿ
ಗ್ಬಲಂದ ಬಲಿಯಿತ್ತು ನಲವಿಂದೆ ಚಿಕದೇವನೃಪ
ನಂದಮಿಗೆ ಪೆರ್ಜಸಮನೊಂದಿ ಸೊಗವಾಳ್ಗುಂ

ಶ್ರೀಪತಿಯ ಸೇವೆಯೆಂದೇ
ಈ ಪರಿಯೊಳ್ ಕ್ಷಾತ್ರಧರ್ಮವೆಸಗುತೆ ಶಾಸ್ತ್ರಾ
ಲಾಪಂಗಳ ತತ್ತ್ವಾರ್ಥ ನಿ
ರೂಪಣದಿಂ ಪೊಳ್ತುಗಳೆವನಪ್ರತಿಮಾಂಕಂ

ಓದಿ ತಿಳಿದೊಳ್ಪಿನಿಂದಂ
ವೇದಾಂತದ ತತ್ತ್ವಗತಿಯನೆಲ್ಲರುಮಱಿವಂ
ತಾದರದಿಂದಪ್ರತಿಮಂ
ಯಾದವಗಿರಿಯೊಡೆಯನಡಿಗೆ ಬಿನ್ನತಿಗೆಯ್ದಂ

ಎಣ್ದೆಸೆಯ ಪಗೆಗಳಡಂಗಿದುದಱಿಂ ಪ್ರಜೆಗಳ್ಗೆ ರಾಜಕಭಯಮಿಲ್ಲದೆಯುಂ ದೇವತಾಪ್ರಸಾದದಿಂ ಮಳೆಬೆಳೆಗಳುಂಟಾದುದಱಿಂ ದೈವಿಕಭಯವಿಲ್ಲದೆಯುಮಿರ್ಪುದಱಿಂ ಪ್ರಜೆಗಳನಿಬರುಂ ಇಹದೊಳ್ ಸೊಗವಾಳ್ದಪರ್. ಇವರ್ಗೆ ಪರಗತಿಯುಮಂ ಸಂಪಾದಿಸವೇಳ್ಪುದೆಂದಾರಯ್ದು

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ
ಯೇऽಪಿ ಸ್ಯುಃ ಪಾಪಯೋನಯಃ
ಸ್ತ್ರಿಯೋ ವೇಶ್ಯಾಸ್ತಥಾ ಶೂದ್ರಾ
ಸ್ತೇऽಪಿ ಯಾನ್ತಿ ಪರಾಂ ಗತಿಮ್

ಎಂದು ಗೀತೆಯೊಳ್ ಶ್ರೀಕೃಷ್ಣಂ ತಾನೇ ನಿರೂಪಿಸಿದ ತೆರದೊಳ್ ಪಿಂತಣ್ಗೆನಿತಾನುಂ ಪಾಪಿಗಳಾದೊಡಂ ಆವ ಜಾತಿಯೊಳ್ ಪುಟ್ಟಿರ್ದೊಡಮಿಾಗಳುಂ ತತ್ತ್ವಜ್ಞಾನದಿಂ ತನ್ನೊಳ್ ಭಕ್ತಿಗೆಯ್ದು ನಂಬಿದವರ್ಗೆ ಮುಕ್ತಿ ತಪ್ಪದೆಂದೆಣಿಸಿ, ಅಕ್ಕರಮನಱಿಯ ದೊಕ್ಕಲಿಗರ್ಗಂ ಪೆಣ್ಗಳ್ಗಂ ಸಕ್ಕದದಿಂ ತತ್ತ್ವಜ್ಞಾನಮುಪ್ಪದರಿದು ಎಂದು-ಎಲ್ಲರು ಮಱಿವಂತೆ ಕನ್ನಡವಾತಿನೊಳಂ ಮೆಲ್ನುಡಿಗಳಿಂದೆ ಅಖಿಲ ತತ್ತ್ವಾರ್ಥಂಗಳಂ ಸಂಗತಿಗೊಳಿಸಿ, ತಾನ್ ತನ್ನ ಕುಲದೇವತೆಯಪ್ಪ ಯಾದವಗಿರಿ ನಾರಾಯಣನಡಿ ದಾವರೆಗಳ್ಗೆ ಬಿನ್ನಪಂಗೆಯ್ವ ನೆವದೊಳ್ ಮೂವತ್ತುಂ ಬಿನ್ನಪಂಗಳಂ ಪವಣ್ಗೆಯ್ದಂ.

## ಗೀತಗೋಪಾಲ

೧

ನೆವಮಿನಿತಿಲ್ಲದೊಲ್ದುವೊಸೆಗುಂ ನೆನೆಗುಂ ಬರಿಕುಂ ದಯಾರಸಂ
ಕವಿತರೆ ನಿಟ್ಟಕುಂ ನಲಿಗುವಾದರಿಕುಂ ಘನವಾರೆ ಮನ್ನಿಕುಂ
ಸವಿನುಡಿದೋಱುಗುಂ ತಿರುಮಲಾರ್ಯನೊಳಪ್ರತಿಮ ಪ್ರಭಾವದಿಂ
ದವನಿಯನಾಳ್ಗೆ ಬಾಳ್ಗೆ ಸತತಂ ಚಿಕದೇವ ನರೇಂದ್ರಚಂದ್ರಮಂ

ಅನವಧಿ ದಯದಿಂದೀ ಪರಿ
ಜನಮನಿತುಮನರಸುಗೆಯ್ತದಿಂ ಪೊರೆದಿಹದೊಳ್
ನೆನೆದಂ ವರಸುಖಮನವ
ರ್ಗನುಗೊಳಿಪಿರವಾವುದೆಂದು ಚಿಕದೇವೇಂದ್ರಂ

ಪರಿಕಿಸೆ ಪರಿಕಿಸೆ ಕಿವಿಯೊಳ್
ಪರಾಶರ ವ್ಯಾಸ ಮುಖ್ಯಮುನಿ ಸಮ್ಮತದಿಂ
ಹರಿಸಂಕೀರ್ತನಮೊಂದೇ
ಪರಗತಿಗನುಕೂಲಮೆಂದು ನಿರವಿಸಿ ನೆಗಳ್ದಂ

ಪಾಲಂ ಬಯಸಿದ ರೋಗಿಗೆ
ಪಾಲಿಂದೌಷಧಮನೀವ ವೈದ್ಯನ ತೆಱದಿಂ
ದೀ ಲೋಗರೊಲ್ವ ಗೀತದ
ಮೂಲದೊಳೇ ಮುಕ್ತಿಗತಿಯ ವೊಗದೋಱಿಸಿದಂ

ತೊಡರ್ದಿರೆ ನುಡಿ ನುಣ್ಚ್ಚರಗಳ
ಬೆಡಂಗು ಮನವೊಲ್ದು ಗೀತಗೋಪಾಲವೆಸರ್
ವಡೆದೊಳ್ಗನ್ನಡಗಬ್ಬಮ
ನೊಡರಿಸಿ ಚಿಕದೇವರಾಯನುನ್ನತಿವೆತ್ತಂ

## ನಂಬಿಕೆ

೨

ನಿನ್ನ ನಂಬಿದೆ । ನಿನ್ನ ನಂಬಿದೆ । ನಿನ್ನ ನಂಬಿದೆ ನಂಬಿದೆ ನೀ
ನೆನ್ನ ಸಲಹು ಬಿಡು ನಿನ್ನ ಚಿತ್ತವಿನ್ನು ॥ ಪ ॥

ನೀನಱಿಯದುದೆ ಪೇಳು
ನಿನ್ನವನೆಂಬೇಳ್ಗೆಯೊಂದೆನಗೆ
ನೀನಲ್ಲದನ್ಯವ ನೆನೆವನಲ್ಲ ಕರ್ಮ
ಜ್ಞಾನ ಭಕುತಿ ವೈರಾಗ್ಯವ ನಂಬಿದವನಲ್ಲ

ಎಳವೆಯೊಳ್ ಪರಿದಾಟ
ಯೌವನದೊಳು ಎಳವೆಣ್ಗಳೊಡನಾಟ
ಬಳಿಕ ವಾರ್ಧಿಕದೊಳು ಪಲವೆಡರಿನ ಕಾಟ
ತಿಳಿಯೆ ಕರ್ಮಯೋಗ ತೀರದೆಂದಿಗು ರಂಗ

ವೇದಾಂತಗಳು ಪಲವು
ಅವಱೊಳು ವಿವಾದಂಗಳವು ಕೆಲವು
ಭೇದಿಸಿ ನೋಡಲು ವೇದ್ಯವಾಗದು ತಲವು
ಓದುಗಳಿಂ ಜ್ಞಾನಯೋಗ ಸಾಗದೆಂದಿಗು

ತನುವ ದಂಡಿಪುದರಿದು
ಕರಣಂಗಳ ತಡೆವುದು ಮಿಗೆಯರಿದು
ಮನವ ಬಲ್ಪಿಡಿವುದು ಮತ್ತಮರಿದರಿದು
ನೆನಹಿನೊಳ್ ವೈರಾಗ್ಯ ನೆಲೆಗೊಳ್ಳದೆಂದಿಗು

ಸಿರಿಯಾಸೆ ಕಡುನಿಡಿದು
ಸಗ್ಗದ ನಾಡ ಸೆಱೆಯಾಸೆಯೆಡೆಗೂಡದು
ಮರಳಿ ಕೈವಲ್ಯದ ಮರುಳು ಬೆನ್ನಬಿಡದು
ಪರಮ ಭಕುತಿಯೋಗ ಬಲಿಯದೆಂದಿಗು ರಂಗ

## ತಪ್ಪು ಯಾರದು ?

ತಪ್ಪದಾರದು । ತಿಳಿದು ನೋಡೆ ತಪ್ಪದಾರದು । ತಪ್ಪು ನೆಪ್ಪುಗಳ
ವಿಕಲ್ಪಿಸದೆಲ್ಲವ । ನೊಪ್ಪುಗೆಯ್ದೆನ್ನನೊಲಿದು ಪಾಲಿಸು ಕೃಷ್ಣ ||ಪ||

ಆರಯ್ಯೆ ಮುಗ್ಗಿಱಿವಂಧನ ತಪ್ಪೋ
ದಾರಿದೋಱುವ ದಂಡಧಾರನ ತಪ್ಪೋ

ಮೇರೆಯಱಿಯದೆನ್ನಮೇಲಣ ತಪ್ಪೋ
ನಾರಾಯಣ ನಿನ್ನ ನಟನೆಯ ತಪ್ಪೋ

ತೊಂಡು ಮೇವ ಪಸುವಿಂಡಿನ ತಪ್ಪೋ
ಕಂಡು ಕಾಯದ ತುಱುಗಾವನ ತಪ್ಪೋ
ಗಂಡುಮೀಱುವೆನ್ನ ಗೆಯ್ಮೆಯ ತಪ್ಪೋ
ಕೊಂಡಾಳುವ ನಿನ್ನ ಕೂರ್ಮೆಯ ತಪ್ಪೋ

ಬಾವಿಯ ಬಳಸುವ ಪಸುಳೆಯ ತಪ್ಪೋ
ತಾ ವಂದು ತಡೆಯದ ತಾಯದು ತಪ್ಪೋ
ಈ ವಿಷಯಕೆ ಮುಗ್ಗುವೆನ್ನದು ತಪ್ಪೋ
ಆ ವೇಳೆಗಾಪುಗೆಯ್ಯದ ನಿನ್ನ ತಪ್ಪೋ

ಗುಱಿಯ ತಾಕದ ಮೊನೆಗೋಲಿನ ತಪ್ಪೋ
ಕುಱಿತೆಸೆಯದ ಬೀರಗುವರನ ತಪ್ಪೋ
ಬಱುಗೆಯ್ಮೆಗೆಯ್ವೆನ್ನ ಭಾವದ ತಪ್ಪೋ
ಅಱಿವುದೋಱಿಸದ ನಿನ್ನಾಟದ ತಪ್ಪೋ

ಓಜೆಗುಂದುವ ವೀಣೆಯುಲುಹಿನ ತಪ್ಪೋ
ಬಾಜಿಸುವನ ಕಯ್ಯ ಪವಣಿನ ತಪ್ಪೋ
ರಾಜ ಶ್ರೀ ಚಿಕದೇವರಾಯನಿಗೊಲಿದ ಶ್ರೀ
ರಾಜಗೋಪಾಲ ನಿರಾಕರಿಸದೆ ಪೇಳು

## ಕೃಷ್ಣನ ಕೊಳಲು

೪

ಕಂಗೊಳಿಸದಿರಲಾಱೆ ಕಣ್ಣ ಪುಣ್ಯದ ಬೆಳಸ । ಕಂಗೊಳಿಸದಿರಲಾಱೆನೆ
ಪೊಂಗೊಳಲ ನುಡಿಸುತಿಳಿಹೊತ್ತಿನೊಳು ಪುರವೀಧಿ ।
ಸಿಂಗರಿಸಿ ಮೆಱೆವ ಹರಿಯ ಸಿರಿಯ ||ಪ

ಕ್ರಮದಿ ನಡುತೋಳ್ಮುಡಿಗಳೊಂದಿನಿಸು ಕೊಂಕಿನೊಳು ಕಮನೀಯವೆಂದೆನಿ
ಮೆಱೆಯ

ಸಮತಳದಿ ನಿಂದಡಿಯ ಮುಂದೆ ಮತ್ತೊಂದಡಿಯ ಸಾರ್ಚಿಯುಂಗುಟವನೂಱ

ರಮಣೀಯ ರೇಖೆಯೊಳು ನಿಂದು ಕೊಳಲುಲಿಗೊಳುವ
ರಾಯ ಗೋವಳನ ತೋಱಿ ನೀಱಿ

ಕಳಿವೆತ್ತ ಕತ್ತುರಿಯ ವೀಣೆಯೊಡನೊಡನುಣ್ಮಿ ಕವಿವ ತನಿಗಂಪಿನಂತೆ
ಬಳಿವ ತಾನದ ಗಮಕ ಗತಿಯ ವ್ಯೆಸಿರಿಗೆ ಮೊಗ ಬಗೆಬಗೆಯ ಭಾವವಡೆಯೆ

ಕೊಳಲಿಗಿಂದುಟಿಯ ಸವಿದೋಱಿ ಒಳುದನಿಗೊಳುವ
ಕೊನಬು ಗೋವಳನ ತೋಱಿ ನೀಱಿ

ಕವಿವ ಕಡೆಗಣ್ಗೆ ಸೇರುವ ನೀಳ್ವ ನೆಲೆಗೊಳುವ ಕರಗುವರೆ ಮುಗಿವ ನಗುವ
ನೆವದಿ ತೆರೆಗೊಳುವ ತೇಲುವ ಪೊಳೆವ ಪೊಗರೊಗುವ ನೇಹದಿನಿರಸದಿ ನೆನೆವ

ಸವಿನೋಟದಿಂದ ಕಣ್ಮನವ ಕೈಸೆಱಿಗೊಳುವ
ಚದುರ ಗೋವಳನ ತೋಱಿ ನೀಱಿ

ಹರವಿರಿಂಚರ ಬಗೆಗೆ ಹವಣೆನಿಸದಾನಂದದಿರವ ಗೊಲ್ಲರ ಬೀಡಿನ
ನೆರೆಹೊರೆಯ ಪಲವು ಮರ ಮೊರಡಿ ಮಿಗ ಪಕ್ಕಿ ಕಱು ತುಱುಗಳಿಗೆ ಸೂಱಿಗೊಳಿಸಿ

ತಿರುಮಲಾರ್ಯರ ಮನವ ನೆಲೆವೀಡುಗೊಂಡೆಸೆವ
ದೇವ ಗೋವಳನ ತೋಱಿ ನೀಱಿ

## ೧೫. ಹೊನ್ನಮ್ಮ

### ಸುಮಾರು ಕ್ರಿ. ಶ. ೧೬೮೦

### ಹದಿಬದೆಯ ಧರ್ಮ

ಆದಿನಾರಾಯಣನಾ ಶೇಷನೊಡಗೂಡಿ। ಯಾದರದಿಂದವತರಿಸೆ
ಯಾದವಕುಲವೇಳಿಗೆವೆತ್ತಿರ್ಪುದು। ಮೇದಿನಿಯೊಳು ಮ್ಯೆಮೆವಡೆದು

ಆ ಯಾದವರಿಗೆ ಕುಲದೇವರೆನಿಪ ನಾ। ರಾಯಣನಾದಿಕಾರಣನು
ಶ್ರೀಯೊಡಗೂಡೀ ಕರ್ಣಾಟದೇಶದೊ। ಳೀ ಯಾದವಾದ್ರಿಯೊಳಿಹನು

ಬಲಕೃಷ್ಣರಿಂದೆ ಪಲವು ಪೂಜೆಗೊಂಡಿರ್ಪ। ಕುಲದೇವರ ಸೇವೆಗೆಂದು
ಪಲವು ಯಾದವರಾಯರಾ ದ್ವಾರವತಿಯಿಂ। ದೊಲಿದ್ಯೆತಂದರೀ ನೆಲಕೆ

ಶ್ರೀ ನಾರಾಯಣನಡಿಗಳಿಗೆರಗಿ ಮ। ಹಾನಂದರಸದ ಮ್ಯೆಮೆಯೊಳು
ಆ ನೆಲೆಯನು ಬಿಟ್ಟಗಲಲಾರದೆ ತಾ। ವೀ ನಾಡೊಳು ನೆಲಸಿದರು

ಈ ಶೈಲಕೆರಡು ಗಾವುದ ತೆಂಕಣ ರಮ್ಯ । ದೇಶವ ನೆಲೆವೀಡುಗೊಳಿಸಿ
ಈ ಶೂರರು ನೆಲಸಿದರದರಿಂದೆ ಮ । ಹೀಶೂರಪುರವೆನೆಸಿದುದು

ಶ್ರೀರಂಗಪಟ್ಟಣದೊಳು ರತ್ನ ಸಿಂಹಾಸನ । ನಾರೋಹಣವನಾಚರಿಸಿ
ಧಾರಿಣಿಯನು ಧರ್ಮದೊಳು ಪಾಲಿಸುತ ಮ । ಹಾರಾಜನೆನಿಸಿ ರಾಜಿಪನು

ಧರೆಯು ಪೊರೆವ ಧರ್ಮವ ಸಂಪಾದಿಪ । ಧುರವ ಗೆಲ್ಲುವ ಗೈಮೆಯೊಳು
ನರಪತಿ ಚಿಕದೇವರಾಜೇಂದ್ರಗೆ ಶೌರಿ । ನೆರವಾಗಿಹನು ನೇಮದೊಳು

ಚಿಕದೇವರಾಜಚಂದ್ರಮನ ಪಟ್ಟದ ರಾಣಿ । ಸಕಲ ಸದ್ಗುಣ ಸಂಪನ್ನೆ
ಅಕಲುಷೆಯೆಳವಂದೂರ ದೇವಮ್ಮನು । ಸಕಲ ಸಂಪದದೊಡನಿಹಳು

ಓಲಗಗೊಳುತೊಂದು ದಿನವೆಡಬಲದ ಸು । ಶೀಲೆಯರೊಳು ಕಡೆಗಣ್ಣ
ಸಾಲುವಿಡಿದು ಸುಳಿಸುಳಿಸಿಯೆನ್ನೊಳು ಸತ್ ಕೃ । ಪಾಲೋಕವನೆಸಗಿದನು

ಕರುಣಾಮೃತಾಬ್ಧಿಯ ಕಲ್ಲೋಲಗಳಂತೆ । ತರತರದೊಳು ಕವಿತರುವ
ಸರಸಕಟಾಕ್ಷವನೆಸಗಿಯೆನ್ನೊಳು ಮನ । ಗರಗಿ ಮನ್ನಿಸಲೆಳಸಿದನು

ಅರಸಿ ಕೇಳೀ ಹೊನ್ನಿ ಸರಸ ಸಾಹಿತ್ಯದ । ವರದೇವತೆ ತಾನೆಂದು
ಪರಮಾರ್ಥವಾದಿಯಳಸಿಂಗರಾರ್ಯನು । ಪರಿಪರಿಯೊಳು ಬಣ್ಣಿಪನು

ಇವಳು ಕಾವ್ಯಾಲಂಕಾರ ನಾಟಕಗಳ । ಪವಣಿಗೆಯಿರವ ಬಲ್ಲವಳು
ಇವಳ ಸಾಹಿತ್ಯದ ಸವಿಗೆಳಸುತ್ತೆನ್ನ । ಕಿವಿಗಳು ಕದುಬುಗೊಂಡಿಹವು

ಪವಣಿಗೆಯೊಪ್ಪೆ ಪುರುಳು ಪೊಗೆ ರೀತಿಯುಂ । ಗವಿಸೆಯುಲಂಕಾರಗಳು
ಕವಿದು ಪರಿಯೆ ರಸದೊಳ್ಗಂಪು ಘಮ್ಮನೆ । ಕವಿತೆಯೊಂದನು ಪೇಳಿಸಿಂದು

ಎಂದ ರಾಯನ ನುಡಿಗಾನು ವಿನಯುಗೂಡಿ । ಪಿಂದೆಗೆದಿರೆ ಪಟ್ಟದರಸಿ
ಕಂದ ಬಾರೆನ್ನ ಕಟ್ಟಾಣಿ ಪೆಣ್ಮಣಿಯೆ ಬಾ । ರೆಂದು ಮುಂದಕೆ ಬರಿಸಿದಳು

ಕನ್ನಡ ಜಾಣೆ ನೀ ಬಾರೆಂದು ಕರವಿಡಿ । ದೆನ್ನ ತನ್ನೊತ್ತಿಗೆ ಬರಿಸಿ
ಎನ್ನೊಳು ನೆವಮಿನಿತಿಲ್ಲದೆರಕಗೂಡಿ । ಮನ್ನಿಸಿ ನುಡಿದಳಿಂತೆಂದು

ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದೈಸೆ । ಫಲವಿದನರಿತು ನೀನಿಂದು
ಅಲಸದೆ ನಾಣ್ಚದಂಜದೆಯುಳುಕದೆ ಪೇಳು । ಪಲವಗೆ ಕಬ್ಬದೊಳ್ಪುಗಳಾ

ಇಂತು ನುಡಿದ ರಾಣಿಯೆ ನುಡಿಗೇಳಿಯೋ । ರಂತೆ ಚಿತ್ತವ ಬಲಿವಿಡಿದು
ಸಂತಸ ಮಿಗೆ ಸಭೆಯೊಳು ರಾಯಗೆ ಮಾ । ರಾಂತು ಬಿನ್ನವಿಸಿದೆನಿಂತು

ಅರಸ ಕೇಳಿನಗೆ ನಿನ್ನಡಿಯೂಳಿಗವೊಂ । ದರಸಿಯರಡಿಯೊಲ್ಮೆಯೊಂದು
ಪರಿಕಿಪೊಡಖಿಳಾರ್ಥ ಸಾಧನಂಗಳಿಗಿವು । ನೆರವಾಗಿಹವು ನೇಮದೊಳು

ನಿನ್ನ ಕೃಪಾರಸದಿಂದೈಸೆಯಾನು ಕ । ರ್ಬೊನ್ನು ಚೆಂಬೊನ್ನಾದಂತೆ
ಸನ್ನುತಿವಡೆದೊಳ್ಪುವೆತ್ತು ಸಕಲ ಭಾ । ಗ್ಯೋನ್ನತಿಯೊಡಗೂಡಿಹೆನು

ನಿನ್ನಡಿಸೋಂಕಿನೊಳಖಿಲದುರಿತಗಳ । ಸನ್ನಾಹವ ಸದೆದಟ್ಟಿ
ಚೆನ್ನಿಗ ಚಿಕದೇವರಾಯನ ಸಂಚಿಯ । ಹೊನ್ನಿಯೆಂಬೇಳ್ಗೆವೆತ್ತಿಹೆನು

ಒಡೆಯನಿರಿಸಿದಂತಿರ್ಪುದಲ್ಲದೆ ಪೇ । ಳೊಡವೆಗೆ ಬೇರಿರವುಂಟೆ
ಕಡುಗೂರ್ಮೆಯಿಂದೆ ನಿನ್ನಡಿಯಾಣತಿಯನೆನ್ನ । ಮುಡಿಯೊಳಾಂತೆನು ಮತ್ತೇನು

ಪದಿನೆಂಟು ಬನ್ನಣೆಯೆಂದು ಬವಣಿಗೊಂಡು । ಪದಗೆಟ್ಟು ಬಯಲ ಬಣ್ಣಿಸದೆ
ಮುದದೊಡನಿಹಪರದೇಳ್ಗೆವಡೆಯೆ ಹದಿ । ಬದೆಯ ಧರ್ಮವ ಬಣ್ಣಿಪೆನು

ಪೆಣ್ಣ ಪೆತ್ತವರ ಬಳಗ ಬಳೆವುದು ಬೇಗ । ಪೆಣ್ಣ ಪೆತ್ತವರು ಪೆರ್ಚುವರು
ಪೆಣ್ಣ ಪೆತ್ತುದರಿಂದೆ ಪೆಸರೆನಿಸಿತು ಮಿಗೆ । ಬಣ್ಣವೇರಿತು ಪಾಲ್ಗಡಲು

ಪೆಣ್ಣಿಂದೆ ಪೆರ್ಮೆಗೊಂಡನು ಹಿಮವಂತನು । ಪೆಣ್ಣಿಂದೆ ಭೃಗು ಪೆರ್ಚಿದನು
ಪೆಣ್ಣಿಂದೆ ಜನಕರಾಯನು ಜಸವಡೆದನು । ಪೆಣ್ಣ ನಿಂದಿಸಲೇಕೆ ಪೆರರು

ಸಿರಿರಾಣಿಯ ಸೀತೆಯ ರುಕ್ಮಿಣಿಯ ಶ್ರೀ । ಹರಿಯೊಡನೊಂದೆ ಹಂತಿಯೊಳು
ಇರಿಸಿ ಪೂಜೆಯನೊಡರಿಸುವರು ಪಿರಿಯರು । ಪರಿಕಿಪ್ಪೊಡಿವರು ಪೆಣ್ಣೈಸೆ

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ । ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು । ಕಣ್ಣು ಕಾಣದ ಗಾವಿಲರು

## ೧೬. ಶ್ರೀನಿವಾಸ

### ಸುಮಾರು ಕ್ರಿ. ಶ. ೧೮೩೦

### ಮುಮ್ಮಡಿ ಕೃಷ್ಣರಾಜ ಒಡೆಯರ ವರ್ಧಂತಿ

ಇಂತು ಸಂತರ್ಪಣೆಯ ಸೊಬಗನುರೆ ಬಣ್ಣಿಸುತ
ಸಂತಸದಿ ಮನೆಗೈದಿ ಮಾಧ್ಯಾಹ್ನಿಕಾದಿಗಳ
ನಂತೆಲ್ಲಮಂ ಗೈದು ಶುಚಿಯಾಗಿ ಸತಿ ಗೈದ ಪಾಕಮಂ ಹರಿಗರ್ಪಿಸಿ
ಅಂತರದಿ ಸುತರೊಡನೆ ರುಚಿಯಾಗಿ ಭುಂಜಿಸಿದ
ನಂತರದೊಳಾಸತಿಯು ಭೋಜನಂಗೈದ ಬಳಿ
ಕಂತರಹಿತಾಹ್ಲಾದದಿಂದ ಜನರಲ್‌ಸುರಟ ನೋಡಲ್ಕೆ ಪೊರಮಟ್ಟನು

ಬಂದು ಸತಿಸುತರೊಡನೆಯರಮನೆಯ ಬಾಗಿಲೊಳ್
ನಿಂದಿರುವ ಗಜ ಹಯ ವರೂಥಾದಿ ರೋಹಕರ
ಸಂದಣಿಯ ಬಾಯ ಭಲ್ಲೆಗಳ ಪಿಡಿದಿರ್ಪವರನಿಂಗ್ಲೀಷು ವಾದ್ಯದವರ

ಚೆಂದದಿಂದ ಶ್ರುತಿಮೌರಿಕೊಳಲುಗಳ ನುಡಿಸುವರ
ಬಂಧುರದಿ ಕಹಳೆ ತುತ್ತೂರಿಗಳನೂದುವರ
ನಿಂದು ಸಾನಂದದಿಂ ಭೇರೀನಗಾರಿಗಳ ಬಡಿವವರ ತೋರಿಸಿದನು

ಬಳಿಕ ಕೃಷ್ಣೇಂದ್ರನೃಪನಂಬಾವಿಲಾಸದೊಳ್
ತಳತಳಿಸುತಿರುವ ನವರತ್ನ ಭದ್ರಾಸನದಿ
ಕಲಿತ ಸಂತೋಷದಿಂ ಕುಳಿತಿರಲು ಸಕಲಾಧಿಕಾರಿಗಳ್ ಭಕ್ತಿಯಿಂದ
ನೆಲತನಕ ತಲೆಗಳಂ ಬಾಗಿಸುತ ಮುಜರೆಯಂ
ಕಲಿಕಾಲ ಕೃಷ್ಣನಾದೀ ಕೃಷ್ಣರಾಜಂಗೆ
ನಿಲವಿಲ್ಲದೇಗೈದರೀ ಮಹಾವಿಭುಸದೃಶರಾರುಂಟು ಲೋಕದೊಳಗೆ

ಇಂತು ಸಂಭ್ರಮದಿಂದ ಕೃಷ್ಣರಾಜೇಂದ್ರನೊ
ಡ್ಡಂತಿಯುತ್ಸವವ ಕವಿ ಸತಿಸಹಿತ ನೋಡುತ್ತ
ಸಂತಸದಿ ಪೊಗಳುತ್ತ ನಲಿದು ಕುಣಿದಾಡುತ್ತ ಮಕ್ಕಳಿಗೆ ತೋರಿಸುತ್ತ
ಸಂತೋಷವಾಯಿತೇ ನಿಮಗೆಂದು ಕೇಳುತ್ತ
ಕಂತುಸಮ ಕೃಷ್ಣೇಂದ್ರ ದರ್ಶನದ ಪುಣ್ಯಮೆಮ
ಗಂತವಿಲ್ಲದೆ ಸಕಲ ಸಂಪತ್ತುಗಳ ಕೊಡುವುದೆಂದು ತಾ ಪೇಳ್ದ ಸತಿಗೆ

## ೧೭. ಅಯ್ಯಶಾಸ್ತ್ರಿ

### ಕ್ರಿ. ಶ. ೧೮೫೪-೧೯೩೪

### ನಾಲ್ವಡಿ ಕೃಷ್ಣರಾಜ ಒಡೆಯರವರು ರಾಜ್ಯಭಾರ ವಹಿಸಿದ್ದು

ಘನ ತೇಜೋನಿಧಿ ಕರ್ಜನೆಂದೆನಿಸಿದಾ ಆಂಗ್ಲೇಯ ಸರ್ವಾಧಿಕಾ
ರಿ ನಿಜಾನೀಕ ಸಮೇತನಾಗಿ ಮುದದಿಂ ಶ್ರೀಮನ್ಮಹೀಶೂರ ಪ
ತ್ತನಮಂ ಸಾರ್ತರೆ ರಾಯಮನ್ನಣೆಗಳಂ ಮಾರಾಣಿಯಾತಂಗೆ ನಂ
ದನನಿಂ ಮಾಡಿಸಿದಳ್ ಮಹಾವಿಭವದಿಂ ಶ್ರೀಕೃಷ್ಣರಾಜೇಂದ್ರನಿಂ

ಅಂತಾತಂ ಬಂದಾಂಗ್ಲೇಯ ಮಹಾಧಿಕಾರಿ ನಿವಾಸಾರ್ಥಮಪ್ಪ ಮಹಾ ಸೌಧದೊಳ್ ಬೀಡಂ ಬಿಟ್ಟ ಸಮನಂತರಮೆ ಶಾಲಿವಾಹನ ಶಕದ ಶರನೇತ್ರವಸು ಚಂದ್ರಮಿತ ಶುಭಕೃದ್ವತ್ಸರ ಶ್ರಾವಣ ಶುಕ್ಲ ಪಂಚಮಿಯ ಪೊಳ್ತಡಮೆ ನಿಜ

ವೈಭವ ಪರಾಜಿತ ವೈಜಯಂತವಪ್ಪ ರಾಜಸಭಾಮಂಟಪದೊಳ್ ಪಲಬರ್ ಮಹಾಧಿಕಾರಿಗಳುಂ ಪ್ರಮುಖರೆನಿಸಿದ ಪೌರರುಂ ನಾಡಿಗರುಂ ಪೆಸರ್ವೆತ್ತ ಸುಧೀ ಮಣಿಗಳುಂ ಸಾಮಂತರಾಜರುಂ ತಮ್ತಮ್ಮ ಸಮುಚಿತ ಸ್ಥಾನಂಗಳೊಳ್ ಮಂಡಿ ಸಿರ್ಪಿನಂ ಮಹಾರಾಜ್ಞಿ ನಿಜಪರಿವಾರಂ ಬೆರಸಂತಃಪುರೋಚಿತಮಾದ ಮೇಲುಪ್ಪ ರಿಗೆಯನಲಂಕರಿಸಿರ್ಪಿನೆಗಂ ಮಹಾವೀರರಪ್ಪ ಸೈನಿಕರ್ ತಮ್ತಮ್ಮ ಕೈದುಗಳಂ ಪಿಡಿದು ಗಂಡಭೇರುಂಡ ಧ್ವಜದಿಂದೊಡಗೂಡಿ ಮುಂಗಡೆಯಂಗಳದೊಳ್ ವಂಗಡಂ ಗೊಂಡು ನಿಂದಿರ್ಪನ್ನಮೂಳಿಗದ ಜನಮಲ್ಲಲ್ಲಿ ಕಯ್ಗಳಂ ಕಟ್ಟಿಕೊಂಡು ನಿಂದು ರಾಯಸಮಂ ಕಾದುಕೊಂಡಿರ್ಪನ್ನೆಗಂ

ಆ ರಾಜಸದನಕ್ಕೆ ಶತ
ಘ್ನೀರವಮೆಣ್ದೆಸೆಯನೆಯ್ದಲೆಯ್ತಂದಂ ನಾ
ಲ್ವಾರುವದ ತೇರನಡರ್ದಾ
ಭಾರತ ಸರ್ವಾಧಿಕಾರಿಯಾಂಗ್ಲೇಯವರಂ

ಅಂತು ಬಂದಾತನಿದಿರ್ವಂದು ತನ್ನಂ ಮನ್ನಿಸಿದ ಮಹಾರಾಜ ಶ್ರೀ ಕೃಷ್ಣ ರಾಜೇಂದ್ರನೊಡನಾಸ್ಥಾನಮನೊಳಪೊಕ್ಕು ಸಭಾಮಧ್ಯದೊಳ್ ನಿಂದು ಸಭಾಸದರಂ ನೋಡಿ ಕೇಳಿರೈ ಮಹಾಶಯರಪ್ಪ ಸಾಮಾಜಿಕರಿರಾ ಮಹಾರಾಜನೀ ಕೃಷ್ಣರಾಜಂ ಬಾಲ್ಯಮಂ ಕಳೆದು ಯೌವನಸ್ಥನಾಗಿರ್ಪನೆಂಬುದಂ ಮುನ್ನಮೆ ತನಗೆ ಪಟ್ಟಾಭಿ ಷೇಕ ಮಹೋತ್ಸವಂ ಬಳೆದಂದಿನಿಂದಿನ್ನೆವರಮಿಾತಂ ಸನ್ಮಾರ್ಗವರ್ತಿಯಾಗಿ ನಿರ ವದ್ಯ ವಿದ್ಯಾಭ್ಯಾಸಂಗೆಯ್ದನೇಕ ರಾಜಧರ್ಮಂಗಳುಮಂ ಸ್ವದೇಶದೊಳಮನ್ಯದೇಶಂ ಗಳೊಳಂ ಸಂಚಾರಂಗೆಯ್ದು ಸಮುಚಿತ ಲೋಕ ವ್ಯವಹಾರಮುಮಂ ತಿಳಿದು ರಾಜ್ಯಾಧಿಕಾರಕ್ಕೆ ತಕ್ಕ ತಕ್ಕುಮೆಯಂ ಪಡೆದಿರ್ಪನೆಂಬುದುಂ ನಿಮ್ಮೆಲ್ಲರ್ಗಂ ವಿದಿತ ಮಾಗಿರ್ಪುದೈಸೆ, ರಾಜ್ಯಮಿದಾದೊಡಯ್ವತ್ತುಂ ಲಕ್ಕದೆಣಿಕೆಯ ಜನಂಗಳನೊಳ ಕೊಂಡು ನೀಡುಂ ಪಿರಿದಾಗಿರ್ಪುದು ಸಾಮಾನ್ಯಮಲ್ತು ಮತ್ತಂ ನಿರತಿಶಯ ಬುದ್ಧಿ ಪ್ರಾಚುರ್ಯನೆನಿಸಿದ ಶೇಷಾದ್ರಿಯಾರ್ಯನ ಮಂತ್ರಿತ್ವದೊಳ್ ಪಿರಿದು ಮೇಳ್ಗೆವಡೆದಿರ್ಪುದಿಂತಿದಂ ಬಾಲನಪ್ಪ ಕುವರಂಗೆ ಪಡಿಯೆನಿಸಿ ಕಂದು ಕುಂದುಗಳೇ ನೊಂದುಮಿಲ್ಲದಿನ್ನೆವರಂ ಕಯ್ಗೊಯ್ದ ವಾಣೀವಿಲಾಸದ ಮಾರಾಣಿಯ ಜಾಣ್ಮೆ ನಾಡೆ ಪೊಗಳ್ಕೆಗೆಡೆಯಾದುದಿಂತೀ ಮಹೀಶೂರ ರಾಜ್ಯದಧಿಕಾರಮನೀಗಳೀ ಮಹಾರಾಜ ಕೃಷ್ಣರಾಜೇಂದ್ರನಧೀನಮಂ ಮಾಡಿರ್ಪೆನದನೀತಂ ನಿಜಧರ್ಮದಿಂ ಪಾಲಿಸುತ್ತೆ ಚಿರಕಾಲಂ ಸೊಗದಿಂದಿರ್ಕೆಂದು ಜಗದೀಶನಂ ಪ್ರಾರ್ಥಿಸುವೆನೆಂದು ಘಂಟಾ ಘೋಷದಿಂ ನುಡಿವುದುಮೆಲ್ಲರುಂ ಜಯಘೋಷಮಂ ಮಾಡಿದರಾಕ್ಷಣದೊಳ್

ದೊರೆವಡೆದ ಸತ್ಯಮೇವೋ
ದ್ಧರಾವ್ಯುಹಮೆನಿಪ್ಪ ಲೇಖನದ ಕನ್ನಡ ನಾ
ಡರಸರೆರಳ್ದಲೆವಕ್ಕಿಯು
ಕುರುಪಿನ ಪಳವಿಗೆಯನೆತ್ತಿದರ್ ಪಡೆವಳ್ಳರ್

ನೆಗಪಿದ ತಮ್ಮಾಳ್ದನ ಪಳ
ವಿಗೆಯಂ ಕಂಡೊಡನೆ ಪೊರಗೆ ನೆರೆದಿರ್ದ ಜನಂ
ಮುಗಿಲಂ ಮುಟ್ಟೆ ಜಯಧ್ವನಿ
ನೆಗಳ್ದುದು ಕರತಾಳ ಘೋಷಮಂ ಮುದದಿಂದಂ

ತೀವಿತ್ತು ಸೈನಿಕರ ಕ
ಯ್ಗೋವಿಗಳೊಗ್ಗೊಗ್ಗಿನುಣ್ಮಿದಬ್ಬರಮುಂ ಪೆ
ರ್ಗೋವಿಗಳಿಂದಂ ಪೊಣ್ಮಿದ
ಗಾವರಮುಂ ಭೂ ನಭೋಂತರಾಳಮನೆಲ್ಲಂ

## ೧. ಗರತಿಯ ಹಾಡುಗಳು

ತಾವರಿಯ ಗಿಡ ಹುಟ್ಟಿ ದೇವರಿಗೆ ನೆರಳಾದಿ
ನಾ ಹುಟ್ಟಿ ಮನಿಗೆ ಎರವಾದೆ। ಹಡೆದವ್ವ
ನೀ ಕೊಟ್ಟ ಮನಿಗೆ ಹೆಸರಾದೆ

ಬ್ಯಾಸಗಿ ದಿವಸಕ ಬೇವಿನ ಮರ ತಂಪ
ಭೀಮರತಿಯೆಂಬ ಹೊಳಿ ತಂಪ। ಹಡೆದವ್ವ
ನೀ ತಂಪ ನನ್ನ ತವರೀಗಿ

ಹೆಣ್ಣು ಹಡೆಯಲಿ ಬ್ಯಾಡ ಹೆರವರಿಗಿ ಕೊಡಬ್ಯಾಡ
ಹೆಣ್ಣು ಹೋಗಾಗ ಅಳಬ್ಯಾಡ। ಹಡೆದವ್ವ
ಸಿಟ್ಟಾಗಿ ಶಿವಗೆ ಬೈಬ್ಯಾಡ

ತಾಯಿ ಮಕ್ಕಳ ದನಿಯು ತಾಳ ಬಾರಿಸಿದಾಂಗ
ಜೋಡ ಕಿನ್ನೂರಿ ನುಡಿದಾಂಗ। ಹಲಸಂಗಿ
ಹೊತ್ತೇರಿ ತಾಸೆ ಬಡೆದಾಂಗ

ತಾಯಿ ಕಾಣದ ಜೀವ ತಾವೂರಿ ಬಾವೂರಿ
ಭಾಳ ಬಿಸಲಾನ ಅವರೀಯ। ಹೂವಿನ್ಹಾಂಗ
ಬಾಡತೀನಿ ತಾಯಿ ಕರೆದೊಯ್ಯ

ಗಂಜೀಯ ಕುಡಿದರು ಗಂಡನ ಮನಿ ಲೇಸ
ಅಂದಣದ ಮ್ಯಾಲ ಚವುರವ। ಸಾರಿದರ
ಹಂಗೀನ ತವರ ಮನಿ ಸಾಕ

ತಾಯಿಲ್ದ ತವರೀಗಿ ಹೋಗದಿರು ನೆನ ಮನವ
ನೀರಿಲ್ದ ಕೆರಿಗಿ ಕರ ಬಂದು। ತಿರುಗಾಗ
ಆಗ ನೋಡದರ ದುಃಖಗಳ

ಅಡಗೀಯ ಮನಿಯಾಗ ಮಡದೀಯ ಸುಳುವಿಲ್ಲ
ಅಡಗಿ ಬಾಯೀಗಿ ರುಚಿಯಿಲ್ಲ। ಹಡೆದವ್ವ
ಮಡದಿ ತವರೀಗಿ ಹೋಗ್ಯಾಳ

ಹಚ್ಚಡದ ಪಡರಾಗ ಅಚ್ಚಮಲ್ಲಿಗಿ ಹೂವ
ಬಿಚ್ಚಿ ನನ ಮ್ಯಾಲ ಒಗೆವಂಥ। ರಾಯರನ
ಬಿಟ್ಹ್ಯಾಂಗ ಬರಲಿ ಹಡದವ್ವ

ಬಟ್ಟಲಗಣ್ಣೀಲಿ ದಿಟ್ಟೇಸಿ ನೋಡ್ಯಾರ
ಸಿಟ್ಯಾಕೊ ರಾಯ ನನ ಮ್ಯಾಲ। ನಾ ಅಂಥ
ಹುಟ್ಟಿಸ್ಯಾಡವರ ಮಗಳಲ್ಲ

ರಾಯ ಬರತಾರಂತ ರಾತ್ರಿಯಲಿ ನೀರಿಟ್ಟ
ರನ್ನ ಬಚ್ಚಲಕ ಮಣಿಹಾಕಿ। ಕೇಳೀನ
ಸಣ್ಣವಳ ಮ್ಯಾಲ ಸಂವತ್ಯಾಕ

ಯಾಲಕ್ಕಿಕಾಯ್ ಸುಲಿದು ಯಾವಡಗಿ ಮಾಡಲಿ
ಊರಿಗ್ಹೋಗ್ಯಾರ ರಾಯರು। ಬಾರದೆ
ಯಾವಡಗಿ ಮಾಡಿ ಫಲವೇನ

ಅಳುವ ಕಂದನ ತುಟಿಯು ಹವಳದ ಕುಡಿಯಂಗ
ಕುಡಿಹುಬ್ಬು ಬೇವಿನೆಸಳಂಗ। ಕಣ್ನೋಟ
ಶಿವನ ಕೈಯಲಗು ಹೊಳೆದಂಗ

ತಾಯಿದ್ರ ತವರ್ಹೆಚ್ಚು ತಂದಿದ್ರ ಬಳಗ್ಹೆಚ್ಚು
ಸಾವಿರಕೆ ಹೆಚ್ಚು ಪತಿಪುರುಷ। ಹೊಟ್ಟೇಯ
ಮಾಣಿಕದ ಹರಳು ಮಗ ಹೆಚ್ಚು

ನನ್ನ ಅಂಗಳದಾಗ ಮಲ್ಲಿಗಿ ಗಿಡ ಹುಟ್ಟಿ
ಝುಲ್ಲೀಸಬ್ಯಾಡೊ ಗಿಣಿರಾಮಾ। ನಿಮ್ಮಂಥ
ಬಾಲರ್ಹೋಗ್ಯಾರ ಝಳಕಾಕ

ಬಾಲಕರಿಲ್ಲದ ಬಾಲೀದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದಂಗ। ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದಂಗ

ಕಂದನ ಕುಡು ಶಿವನೆ ಬಂಧನಬಡಲಾರೆ
ಹಂಗೀನ ಬಾನ ಉಣಲಾರೆ। ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ

# ೨. ಗೋವಿನ ಹಾಡು

೧

ಧರಣಿ ಮಂಡಲ ಮಧ್ಯದೊಳಗೆ
ಮೆರೆಯುತಿಹ ಕರ್ನಾಟ ದೇಶದೊ
ಳಿರುವ ಕಾಳಿಂಗನೆಂಬ ಗೊಲ್ಲನ
ಪರಿಯ ನಾನೆಂತು ಪೇಳ್ವೆನು

ಗಿರಿಗಳೆಡೆಯಲಿ ಅಡವಿ ನಡುವೆ
ತುರುವ ದೊಡ್ಡಿಯ ಮಾಡಿಕೊಂಡು
ಮೆರೆವ ಕಾಳಿಂಗನೆಂಬ ಗೊಲ್ಲನ
ಸಿರಿಯ ನಾನೆಂತು ಪೇಳ್ವೆನು

ಗೊಲ್ಲದೊಡ್ಡಿಯೊಳಿರುವ ಹಸುಗಳು
ಎಲ್ಲ ಬೆಟ್ಟದ ಮೇಲೆ ಮೇಯುತ
ಹುಲ್ಲುನೊಳ್ಳೆಯ ನೀರ ಕುಡಿಯುತ
ಅಲ್ಲಿ ಮೆರೆದುವರಣ್ಯದಿ

ಕರುಗಳನು ನೆನೆನೆನೆದು ಹಸುಗಳು
ಕೊರಳ ಘಂಟೆ ಘಣಿರು ಘಣಿರೆನೆ
ಪರಿದು ಲಂಘಿಸಿ ಚಿಮ್ಮಿ ನೆಗೆಯುತ
ಮರಳಿ ಬಂದುವು ದೊಡ್ಡಿಗೆ

ತಮ್ಮ ತಾಯನು ಕಂಡು ಕರುಗಳು
ಅಮ್ಮಾ ಎಂದು ಕೂಗಿ ನಲಿಯುತ
ಸುಮ್ಮಾನದೊಳು ಮೊಲೆಯನುಂಡು
ನಿರ್ಮಲದೊಳು ಇದ್ದುವು

ಉದಯ ಕಾಲದೊಳೆದ್ದು ಗೊಲ್ಲನು
ನದಿಯ ಸ್ನಾನವ ಮಾಡಿಕೊಂಡು
ಮುದದಿ ತಿಲಕವ ಹಣೆಯೊಳಿಟ್ಟು
ಚದುರ ಶಿಖೆಯನು ಹಾಕಿದ

ಎಳೆಯ ಮಾವಿನ ಮರದ ಕೆಳಗೆ
ಕೊಳಲನೂದುತ ಗೊಲ್ಲಗೌಡನು
ಬಳಸಿ ನಿಂದ ತುರುಗಳನ್ನು
ಬಳಿಗೆ ಕರೆದನು ಹರುಷದಿ

ಗಂಗೆ ಬಾರೇ ಗೌರಿ ಬಾರೇ
ತುಂಗಭದ್ರೆ ತಾಯಿ ಬಾರೇ
ಕಾಮಧೇನು ನೀನು ಬಾರೆಂದು
ಪ್ರೇಮದಲಿ ಗೊಲ್ಲ ಕರೆದನು

ಗೊಲ್ಲ ಕರೆದ ಧ್ವನಿಯ ಕೇಳಿ
ಎಲ್ಲ ಹಸುಗಳು ಬಂದು ನಿಂತು
ಚೆಲ್ಲಿ ಸೂಸಿ ಹಾಲು ಕರೆಯಲು
ಅಲ್ಲಿ ತುಂಬಿತು ಬಿಂದಿಗೆ

೨

ಹಬ್ಬಿದಾ ಮಲೆ ಮಧ್ಯದೊಳಗೆ
ಅರ್ಭುತನೆಂದೆಂಬ ವ್ಯಾಘ್ರನು
ಅಬ್ಬರಿಸಿ ಹಸಿ ಹಸಿದು ಬೆಟ್ಟದ
ಕಿಬ್ಬಿಯೊಳು ತಾನಿದ್ದನು

ಸಿಡಿದು ರೋಷದಿ ಮೊರೆಯುತಾ ಹುಲಿ
ಘುಡುಘುಡಿಸಿ ಭೋರಿಡುತ ಛಂಗನೆ
ತುಡುಕಲೆರಗಿದ ರಭಸಕಂಜಿ
ಚೆದರಿಹೋದುವು ಹಸುಗಳು

ಪುಣ್ಯಕೋಟಿ ಎಂಬ ಗೋವು
ತನ್ನ ಕಂದನ ನೆನೆದುಕೊಂಡು
ಮುನ್ನ ಹಾಲನು ಕೊಡುವೆನೆನುತ
ಚೆನ್ನಾಗಿ ತಾ ಬರುತಿರೆ

ಇಂದೆನಗೆ ಆಹಾರ ಸಿಕ್ಕಿತು
ಎಂದು ಬೇಗನೆ ದುಷ್ಟ ವ್ಯಾಘ್ರನು
ಬಂದು ಬಳಸಿ ಅಡ್ಡಗಟ್ಟಿ
ನಿಂದನಾ ಹುಲಿರಾಯನು

ಮೇಲೆ ಬಿದ್ದು ನಿನ್ನನೀಗಲೆ
ಬೀಳಹೊಯ್ವೆನು ನಿನ್ನ ಹೊಟ್ಟೆಯ
ಸೀಳಿ ಬಿಡುವೆನು ಎನುತ ಕೋಪದಿ
ಖೂಳ ವ್ಯಾಘ್ರನು ಕೂಗಲು

ಒಂದು ಬಿನ್ನಹ ಹುಲಿಯೆ ಕೇಳು
ಕಂದನಿರುವನು ದೊಡ್ಡಿಯೊಳಗೆ
ಒಂದು ನಿಮಿಷದಿ ಮೊಲೆಯ ಕೊಟ್ಟು
ಬಂದು ಸೇರುವೆನಿಲ್ಲಿಗೆ

ಹಸಿದ ವೇಳೆಗೆ ಸಿಕ್ಕಿದೊಡವೆಯ
ವಶವ ಮಾಡದೆ ಬಿಡಲು ನೀನು
ನುಸುಳಿ ಹೋಗುವೆ ಮತ್ತೆ ಬರುವೆಯ
ಹುಸಿಯನಾಡುವೆಯೆಂದಿತು

ಸತ್ಯವೇ ನಮ್ಮ ತಾಯಿ ತಂದೆ
ಸತ್ಯವೇ ನಮ್ಮ ಸರ್ವ ಬಳಗ
ಸತ್ಯವಾಕ್ಯಕೆ ತಪ್ಪಿ ನಡೆದರೆ
ಮೆಚ್ಚನಾ ಪರಮಾತ್ಮನು

೩

ಕೊಂದು ತಿನ್ನುವೆನೆಂಬ ಹುಲಿಗೆ
ಚೆಂದದಿಂದ ಭಾಷೆಯಿತ್ತು
ಕಂದ ನಿನ್ನನು ನೋಡಿ ಹೋಗುವೆ
ನೆಂದು ಬಂದೆನು ದೊಡ್ಡಿಗೆ

ಅಮ್ಮ ನೀನು ಸಾಯಲೇಕೆ
ನಮ್ಮ ತಬ್ಬಲಿ ಮಾಡಲೇಕೆ
ಸುಮ್ಮನಿಲ್ಲಿಯೆ ನಿಲ್ಲೆನುತ್ತ
ಅಮ್ಮನಿಗೆ ಕರು ಹೇಳಲು

ಕೊಟ್ಟ ಭಾಷೆಗೆ ತಪ್ಪಲಾರೆನು
ಕೆಟ್ಟ ಯೋಚನೆ ಮಾಡಲಾರೆನು
ನಿಷ್ಠೆಯಿಂದಲಿ ಪೋಪೆನಲ್ಲಿಗೆ
ಕಟ್ಟಕಡೆಗಿದು ಖಂಡಿತ

ಆರ ಮೊಲೆಯನು ಕುಡಿಯಲಮ್ಮ
ಆರ ಸೇರಿ ಬದುಕಲಮ್ಮ
ಆರ ಬಳಿಯಲಿ ಮಲಗಲಮ್ಮ
ಆರು ನನಗೆ ಹಿತವರು

ಅಮ್ಮಗಳಿರ ಅಕ್ಕಗಳಿರ
ನಮ್ಮ ತಾಯೊಡಹುಟ್ಟುಗಳಿರ
ನಿಮ್ಮ ಕಂದನೆಂದು ಕಾಣಿರಿ
ತಬ್ಬಲಿಯನೀ ಕರುವನು

ಮುಂದೆ ಬಂದರೆ ಹಾಯಬೇಡಿ
ಹಿಂದೆ ಬಂದರೆ ಒದೆಯಬೇಡಿ
ಕಂದ ನಿಮ್ಮವನೆಂದು ಕಾಣಿರಿ
ತಬ್ಬಲಿಯನೀ ಕರುವನು

ಕಟ್ಟಕಡೆಯಲಿ ಮೇಯಬೇಡ
ಬೆಟ್ಟದೊತ್ತಿಗೆ ಹೋಗಬೇಡ
ದುಷ್ಟ ವ್ಯಾಘ್ರನು ಹೊಂಚುತಿರುವನು
ನಟ್ಟನಡುವಿರು ಕಂದನೆ

ತಬ್ಬಲಿ ನೀನಾದೆ ಮಗನೆ
ಹೆಬ್ಬುಲಿಯ ಬಾಯನ್ನು ಹೊಗುವೆನು
ಇಬ್ಬರಾ ಋಣ ತೀರಿತೆಂದು
ತಬ್ಬಿಕೊಂಡಿತು ಕಂದನ

೪

ಗೋವು ಕರುವನು ಬಿಟ್ಟು ಬಂದು
ಸಾವಕಾಶವ ಮಾಡದಂತೆ
ಗವಿಯ ಬಾಗಿಲ ಸೇರಿನಿಂತು
ತವಕದಲಿ ಹುಲಿಗೆಂದಿತು

ಖಂಡವಿದೆ ಕೋ ಮಾಂಸವಿದೆ ಕೋ
ಗುಂಡಿಗೆಯ ಬಿಸಿ ರಕ್ತವಿದೆ ಕೋ
ಚಂಡ ವ್ಯಾಘ್ರನೆ ನೀನಿದೆಲ್ಲವ
ನುಂಡು ಸಂತಸದಿಂದಿರು

ಪುಣ್ಯಕೋಟಿಯ ಮಾತ ಕೇಳಿ
ಕಣ್ಣನೀರನ್ನು ಸುರಿಸಿ ನೊಂದು
ಕನ್ನೆಯಿವಳನು ಕೊಂದು ತಿಂದರೆ
ಮೆಚ್ಚನಾ ಪರಮಾತ್ಮನು

ಎನ್ನ ಒಡಹುಟ್ಟಕ್ಕ ನೀನು
ನಿನ್ನ ಕೊಂದು ನಾನೇನ ಪಡೆವೆನು
ಎನ್ನುತಾ ಹುಲಿ ಹಾರಿ ನೆಗೆದು
ತನ್ನ ಪ್ರಾಣವ ಬಿಟ್ಟಿತು

## ೩. ಮಾನವಮಿ ಪದ

ಆಶ್ವಯುಜ ಶುದ್ಧ ಮಾನವಮಿ ಬರಲೆಂದು
ಶಾಶ್ವತದಿ ಹರಸಿದೆವು ಬಾಲಕರು ಬಂದು
ಈಶ ನಿಮಗತ್ಯಧಿಕ ಸುಖವ ಕೊಡಲೆಂದು
ಲೇಸಾಗಿ ಹರಸಿದೆವು ಬಾಲಕರು ಬಂದು

ಧನಕನಕ ವಸ್ತ್ರವಾಹನವಾಗಲೆಂದು
ಕನಕದಂಡಿಗೆ ಚೌರಿ ನಿಮಗಾಗಲೆಂದು
ದಿನದಿನಕೆ ರಾಜಮನ್ನಣೆ ಹೆಚ್ಚಲೆಂದು
ಅನುದಿನವು ಹರಸಿದೆವು ಬಾಲಕರು ಬಂದು

ಛತ್ರ ಚಾಮರ ತೇಜಿ ನಿಮಗಾಗಲೆಂದು
ಅರ್ತಿಯಿಂ ಮಾಲುಕುಮಿ ನಿಮಗೊಲಿಯಲೆಂದು
ಪುತ್ರಪೌತ್ರರು ನಿಮಗೆ ಹೆಚ್ಚುತಿರಲೆಂದು
ಅರ್ತಿಯಿಂ ಹರಸಿದೆವು ಬಾಲಕರು ಬಂದು

ಮಳೆ ಬಂದು ಬೆಳೆ ಬೆಳೆದು ಧರೆ ತಣಿಯಲೆಂದು
ತಿಳಿಗೊಳಗಳುಕ್ಕಿ ತುರುಗಳು ಕರೆಯಲೆಂದು
ನಳಿನಮುಖಿಯರು ಸುಪುತ್ರರ ಪಡೆಯಲೆಂದು
ಇಳೆಯೊಳಗೆ ಹರಸಿದೆವು ಬಾಲಕರು ಬಂದು

ಆಯುರಾರೋಗ್ಯಗಳು ನಿಮಗಾಗಲೆಂದು
ಶ್ರೇಯಸ್ಸು ಸಂಪತ್ತು ಹೆಚ್ಚುತಿರಲೆಂದು
ಆಯತದಿ ಜಗದೊಡೆಯನೊಲವಾಗಲೆಂದು
ಪ್ರೀಯದಿಂ ಹರಸಿದೆವು ಬಾಲಕರು ಬಂದು

## ೪. ಕೆರೆಗೆ ಹಾರ

(ಕೋಲಾಟದ ಪದ)

೧

ಕಲ್ಲನಕೇರಿ ಮಲ್ಲನಗೌಡಾ ಕೆರೆಯೊಂದs ಕಟ್ಟಿಸ್ಯಾನು *
ಕೆರೆಯೊಂದ ಕಟ್ಟಿಸ್ಯಾನು ಸೆರೆಮುಕ್ಕ ನೀರಿಲ್ಲ
ಸೆರೆಮುಕ್ಕs ನೀರಿಲ್ಲ ಹೊತ್ತಿಗಿ ತಗಸ್ಯಾರು
ಹೊತ್ತಿಗೆ ತಗಸ್ಯಾರು ಜೋಯಿಸ ಕೇಳ್ಯಾರು
" ದೇವರಲ್ಲ ದಿಂಡ್ರಲ್ಲ ದೆವ್ವಲ್ಲ ಬೂತಲ್ಲ "
" ಹಿರಿಸೊಸಿ ಮಲ್ಲವನ ಹಾರವ ಕೊಡಬೇಕು "
ಹಾರವ ಕೊಟ್ಟರ ನೀರು ಬೀಳೂವಂದ್ರೂ
" ಹಿರಿ ಸೊಸಿನ್ನ ಕೊಟ್ಟರೆ ಹಿರಿತನಕ ಯಾರಿಲ್ಲ "
" ಕಡೆ ಸೊಸಿ ಭಾಗೀರತಿನ್ನ ಹಾರವ ಕೊಡಬೇಕು "
ಹಾರ ಕೊಡಬೇಕಂತ ಮಾತಾತು ಮನೆಯಾಗ

೨

ಸಣ್ಣ ಸೊಸಿ ಭಾಗೀರತಿ ತವರಮನೆಗೆ ಹೊಂಟಾಳು.
" ಅತ್ತೆವ್ವಾ ನಾ ನಮ್ಮ ತವರಮನೆಗೆ ಹೋಗತೀನು "
" ಸರ್‍ರನೆ ಹೋಗವ್ವಾ ಭರ್‍ರನೆ ಬಾರವ್ವಾ "
ಸಣ್ಣ ಸೊಸಿ ಭಾಗೀರತಿ ತವರಮನೆಗೆ ಹೋದಾಳು

---

* ಪ್ರತಿ ಪಾದದ ಕೊನೆಗೂ " ಕೋಲೆನ್ನ ಕೋಲೆ " ಎಂದು ಹೇಳುವರು.

ಮನೆ ಮುಂದ ಹೋಗುದಕ ಅವರಪ್ಪ ಬಂದಾನು
" ಎಂದಿಲ್ಲದೆ ಭಾಗೀರತಿ ಇಂದ್ಯಾಕ ಬಂದೆವ್ವ ? "
" ಬಾಡಿದ ಮಾರ್‍ಯಾಕ ಕಣ್ಣಾಗ ನೀರ್‍ಯಾಕ "
" ನಮ್ಮಾವ ನಮ್ಮತ್ತೆ ಬ್ಯಾರೆ ಇಡುತಾರಂತೆ "
" ಇಟ್ಟರ ಇಡಲೇಳು ಹೊಲಮನಿ ಕೊಡತೇನು "
" ಹೊಲಮನಿ ಒಯ್ದು ಹೊಳೆ ದಂಡ್ಯಾಗ್ಹಾಕಪ್ಪ "
ಅತ್ತಿತ್ತ ಹೋಗುತಲೆ ಅವರವ್ವ ಬಂದಳು
" ಎಂದಿಲ್ಲದೆ ಭಾಗೀರತಿ ಇಂದ್ಯಾಕಳುತಾ ಬಂದೆ? "
" ನಮ್ಮತ್ತೆ ನಮ್ಮಾವ ಬ್ಯಾರೆ ಇಡುತಾರಂತೆ "
" ಇಟ್ಟರೆ ಇಡಲೇಳು ವಾಲಿಜೋಡು ಕೊಡುತೇನೆ "
" ವಾಲಿಯ ಜೋಡೊಯ್ದು ಒಲಿಯಾಗ ಹಾಕವ್ವ "
ಮುಂದಕತ್ತ ಹೋಗುತಲೆ ಅವರಕ್ಕ ಬಂದಳು
ಅವರಕ್ಕ ಬಂದಾಳು ಭಾಗೀರತಿನ್ನ ಕೇಳ್ಯಾಳು
" ಎಂದಿಲ್ಲದೆ ಭಾಗೀರತಿ ಇಂದ್ಯಾಕ ಈ ದುಕ್ಕ ? "
" ನಮ್ಮತ್ತೆ ನಮ್ಮಾವ ಬ್ಯಾರೆ ಇಡುತಾರಂತೆ "
" ಇಟ್ಟರೆ ಇಡಲೇಳs ಮಕ್ಕಳ ಜೋಡಿಗೆ ಕಳವತೇನೆ "
" ಮಕ್ಕಳಿದ್ದರೇನಕ್ಕ ದುಕ್ಕ ಕಳಿದಾವೇನ "
ಸಣ್ಣ ಸೊಸಿ ಭಾಗೀರತಿ ತವರಮನೆಯ ಬಿಟ್ಟು
ತವರಮನಿಯ ಬಿಟ್ಟು ಗೆಣತಿ ಮನೆಗೆ ನಡೆದಳು.
ತಲಬಾಗಿಲದಾಗ ಗೆಳತಿನ್ನ ಕಂಡಳು.
" ಎಂದಿಲ್ಲದೆ ಭಾಗೀರತಿ ಇಂದ್ಯಾಕ ಈ ಅಳುವು ? "
ಅಂಜಿ " ಹೇಳಲೆ ಗೆಳತಿ " ಅಳುಕಿ " ಹೇಳಲೆ ಗೆಳತಿ "
" ಅಂಜಬ್ಯಾಡ ಗೆಳತಿ ಅಳುಕಬ್ಯಾಡ ಗೆಳತಿ "
" ನಮ್ಮತ್ತೆ ನಮ್ಮಾವ ಕೆರೆಗ್ಹಾರ ಕೊಡತಾರಂತ "
" ಕೊಟ್ಟರ ಕೊಡಲೇಳು ಇಟ್ಹಾಂಗ ಇರಬೇಕs ! "
ಸರ್‍ರನೆ ಹೋದಳು ಭರ್‍ರನೆ ಬಂದಳು.

೩

ಬ್ಯಾಳಿಯ ಹಸಮಾಡ್ತ ಬಿಟ್ಟಳು ಕಣ್ಣೀರ.
" ಎಂದಿಲ್ಲದೆ ಭಾಗೀರತಿ ಇಂದ್ಯಾಕ ಕಣ್ಣೀರು "
" ಬ್ಯಾಳ್ಯಾಗಿನ ಹಳ್ಳುಬಂದು ಕಣ್ಣಾಗೆರಚಿದವು ಮಾವಾ "

ಅಕ್ಕಿಯ ಹಸಮಾಡ್ತ ಉಕ್ಯಾವು ಕಣ್ಣೀರು.
" ಎಂದಿಲ್ಲದೆ ಭಾಗೀರತಿ ಇಂದ್ಯಾಕ ಕಣ್ಣೀರು "
" ಅಕ್ಯಾಗಿನ ಹಳ್ಳೊಂದ ಕಣ್ಣಾಗ ಬಿತ್ತತ್ತಿ "
ಉಕ್ಕುವ ನೀರಾಗ ಅಕ್ಕಿಯು ಸುರಿವ್ಯಾರs
ಸಕ್ಕರಿ ಹಾಲಾಗ ಸ್ಯಾವಿಗಿ ಸುರಿವ್ಯಾರ
ಹತ್ತು ಕೊಪ್ಪರಿಗೆ ನೀರು ಉಕ್ಕಿ ಮಳ್ಳತಿತ್ತು
" ಸಿಂಗವ್ವ ಜಳಕ ಮಾಡs ನೀಲವ್ವ ಜಳಕ ಮಾಡs "
ನಿಂಗವ್ವ " ನಾವೊಲ್ಲೆ " ನೀಲವ್ವ " ನಾವೊಲ್ಲೆ "
" ಗಂಗವ್ವ ಜಳಕ ಮಾಡs ಗವರವ್ವ ಜಳಕ ಮಾಡs "
ಗಂಗವ್ವ " ನಾವೊಲ್ಲೆ " ಗವರವ್ವ " ನಾವೊಲ್ಲೆ "
" ಸಣ್ಣ ಸೊಸಿ ಬಾಗವ್ವ ನೀನರೆ ಜಳಕ ಮಾಡs "
ಸಣ್ಣ ಸೊಸಿ ಭಾಗೀರತಿ ಜಳಕನ ಮಾಡ್ಯಾಳು
ಜಳಕನ ಮಾಡ್ಯಾಳು ಬಂಗಾರಬುಟ್ಟಿ ತುಂಬ್ಯಾಳು
ಬಂಗಾರ ಬುಟ್ಟಿ ತುಂಬ್ಯಾಳು ಸಿಂಗಾರಸಿಂಬಿ ಮಾಡ್ಯಾಳು
ಸಿಂಗಾರ ಸಿಂಬಿ ಮಾಡ್ಯಾಳು ಮುಂದ ಮುಂದ ಹೊಂಟಾಳು
ಮುಂದ ಮುಂದ ಭಾಗೀರತಿ ಹಿಂದ್ಹಿಂದ ಎಲ್ಲಾರೂ
ಗಂಗಿ ಪೂಜೆ ಮಾಡ್ಯಾರs ಬೆಲಪತ್ರಿ ಏರಿಸ್ಯಾರs
ಬೆಲಪತ್ರಿ ಏರಿಸ್ಯಾರs ಊಬತ್ತೀ ಧರಿಸ್ಯಾರs
ಸೀರಿ ಕುಬಸಾ ಏರಿಸ್ಯಾರ ಹೂವಿನ ದಂಡಿ ಮುಡಿಸ್ಯಾರs
ಹೂವಿನ ದಂಡಿ ಮುಡಿಸ್ಯಾರ ನೇವದಿ ಮಾಡ್ಯಾರs
ನೇವದಿ ಮಾಡ್ಯಾರು ಎಲ್ಲರು ಉಂಡಾರು
ಎಲ್ಲಾರು ಉಂಡಾರು ಉಳಿದದ್ದು ತುಂಬ್ಯಾರು
ಉಳಿದದ್ದು ತುಂಬ್ಯಾರು ಬಂಗಾರಬುಟ್ಟಿ ಹೊತ್ತಾರು
ಬುಟ್ಟಿ ಹೊತ್ತು ನಡೆದಾರು ಬಂಗಾರಬಟ್ಲ ಮರತರು.
" ಗಂಗವ್ವ ನೀ ಹೋಗ ! ಗವರವ್ವ ನೀ ಹೋಗ ! "
ಗಂಗವ್ವ " ನಾವೊಲ್ಲೆ " ಗವರವ್ವ " ನಾವೊಲ್ಲೆ "
ನಿಂಗವ್ವ ನೀ ಹೋಗs ನೀಲವ್ವ ನೀ ಹೋಗs "
ನಿಂಗವ್ವ " ನಾವೊಲ್ಲೆ " ನೀಲವ್ವ " ನಾವೊಲ್ಲೆ "
" ಸಣ್ಣ ಸೊಸಿ ಭಾಗೀರತಿ ನೀ ತರಹೋಗವ್ವ "
ಸಣ್ಣ ಸೊಸಿ ಭಾಗೀರತಿ ಬಿರಿ ಬಿರಿ ನಡೆದಾಳು
ಬಿರಿ ಬಿರಿ ಹೋದಳು ಬಂಗಾರಬಟ್ಲ ತೊಗೊಂಡಳು
ಒಂದು ಮೆಟ್ಲೇರುದಕ ಪಾದಕ ಬಂದಾಳು ಗಂಗಿ

ಎರಡು ಮೆಟ್ಲೇರುದಕ ಪಾದ ಮುಣಿಗಿಸ್ಯಾಳು ಗಂಗಿ
ಮೂರು ಮೆಟ್ಲೇರುದಕ ಮೊಣಕಾಲಿಗೆ ಬಂದಳು ಗಂಗಿ
ನಾಕು ಮೆಟ್ಲೇರುದಕ ನಡಮುಟ ಬಂದಳು ಗಂಗಿ
ಐದು ಮೆಟ್ಲೇರುದಕ ತುಂಬಿ ಹರಿದಾಳು ಗಂಗಿ
ಸಣ್ಣ ಸೊಸಿ ಭಾಗೀರತಿ ಕೆರೆಗ್ಹಾರವಾದಳು

೪

ಗಂಡ ಮಾದೇವರಾಯ ದಂಡಿನಾಗ್ಹೈದಾನು.
ದಂಡಿನಾಗ್ಹೈದಾನು ಕಂಡನು ಕೆಟ್ಟ ಕನಸ
ಸೆಲ್ಯ ಸುಟ್ಟಾಂಗಾತು ಕೋಲು ಮುರಿದ್ಹಾಂಗಾತು
ಕಟ್ಟಿಸಿದ ಮಾಲೆಲ್ಲ ತಟ್ಟನೆ ಬಿದ್ದಂಗಾತು.
ಗಂಡ ಮಾದೇವರಾಯ ಹತ್ತಿದ ಬತ್ತಲೆಗುದರಿ
ಹತ್ತಿದ ಬತ್ತಲೆಗುದರಿ ಒತ್ತಾರ ಬಂದನು ಮನೆಗೆ
ಬಂದ ಮ್ಹಾದೇವನ ತಂದೆತಾಯಿ ನೋಡಿದರು.
“ ಗಂಗವ್ವ ನೀರ ಕೊಡs ಗವರವ್ವ ನೀರ ಕೊಡ ”
“ ಗಂಗವ್ವ ನೀರ ಕೊಡುದ್ಯಾಕ? ಗವರವ್ವ ನೀರ ಕೊಡುದ್ಯಾಕ ? ”
“ ನನ ಮಡದಿ ಭಾಗೀರತಿ ಎಲ್ಲಿಗ್ಹೋಗ್ಯಾಳವ್ವ ”
“ ನಿನ ಮಡದಿ ಭಾಗೀರತಿ ತವರಿಗೆ ಹೋಗ್ಯಾಳಪ್ಪ ”

೫

ಗಂಡ ಮಾದೇವರಾಯ ಹತ್ತಿದ ಬತ್ತಲೆಗುದರಿ
ಹತ್ತಿದ ಬತ್ತಲೆಗುದರಿ ಹೊಂಟಾನತ್ತೆಯ ಮನೆಗೆ.
ಬಂದಿರು ಅಳಿಯನ ನೋಡಿ ಅಂದಳು ಅತ್ತೆವ್ವ
“ ನಿಂಬೆವ್ವ ನೀರ್ ಕೊಡs ನೀಲವ್ವ ನೀರ್ ಕೊಡs ! ”
“ ನಿಂಬೆವ್ವ ನೀರ್ ಕೊಡುದ್ಯಾಕ ನೀಲವ್ವ ನೀರ್ ಕೊಡುದ್ಯಾಕ ? ”
“ ನನ ಮಡದಿ ಭಾಗೀರತಿ ಎಲ್ಲಿಗ್ಹೋಗ್ಯಾಳತ್ತೀ ”
“ ನಿನ ಮಡದಿ ಭಾಗೀರತಿ ಗೆಣತಿ ಮನೆಗೆ ಹೋಗ್ಯಾಳಪ್ಪ ! ”
ಗಂಡ ಮಾದೇವರಾಯ ಹತ್ತಿದ ಬತ್ತಲೆಗುದರಿ
ಹತ್ತಿದ ಬತ್ತಲೆಗುದರಿ ಗೆಣತಿ ಮನೆಗೆ ಸ್ವಾರಿ.
ಬಂದಿರು ಮಾದೇವನ ಕಂಡಾಳು ಗೆಣತೆವ್ವ

" ಬಾಳವ್ವ ನೀರ್ ಕೊಡ ಬಸವ್ವ ನೀರ್ ಕೊಡ "
" ಬಾಳವ್ವ ನೀರ್ ಕೊಡುದ್ಯಾಕs ಬಸವ್ವ ನೀರ್ ಕೊಡುದ್ಯಾಕ ! "
" ನನ ಮಡದಿ ಭಾಗೀರತಿ ಎಲ್ಲಿಗ್ಹೋಗ್ಯಾಳಕ್ಕ "
" ನಿನ್ನ ಮಡದಿ ಭಾಗೀರತೀದು ಏನು ಹೇಳಲಿ ಸೂರಿ
ನಿಮ್ಮಪ್ಪ ನಿಮ್ಮವ್ವ ಕೆರಿಗ್ಹಾರ ಕೊಟ್ಟರಂತs "
ಗಂಡ ಮಾದೇವರಾಯ ಹತ್ತಿದ ಬತ್ತಲೆಗುದರಿ
ಹತ್ತಿದ ಬತ್ತಲೆಗುದರಿ ಹೊಂಟಾನು ಹೌಹಾರಿ ;
ಕೆರೆಯ ದಂಡೆಗೆ ಬಂದು ಕಣ್ಣೀರು ಇಟ್ಟಾನು
ಕಣ್ಣೀರು ಇಟ್ಟಾನು ನಿಟ್ಟುಸುರು ಬಿಟ್ಟಾನು :
" ಸಾವಿರ ವರಹ ಕೊಟ್ಟರೂ ಸಿಗಲಾರದ ಸತಿ ನೀನು
ಸಿಗಲಾರದ ಸತಿ ನೀನು ನನ ಬಿಟ್ಟು ಎಲ್ಲಿ ಹೋದೆ ? "
ಮುನ್ನೂರು ವರಹ ಕೊಟ್ಟು ಮುತ್ತಿನೋಲೆ ಮಾಡಿಸಿದ್ದೆ
ಮುತ್ತಿನೋಲೆ ಇಟ್ಟುಗೊಳ್ಳೊ ಮುತ್ತೈದೆ ಎಲ್ಲಿಗ್ಹೋದೆ "
ಇಷ್ಟು ಮಾತಾಡಿ ಮಾದೇವ ಬಿಟ್ಟಾನು ಕಣ್ಣೀರು.
ಬಿಟ್ಟನು ಕಣ್ಣೀರs ಹಾರೀದ ಕೆರೆ ನೀರಾಗ.

## ೧. ಕಾಣಿಕೆ

ಮೊದಲು ತಾಯ ಹಾಲ ಕುಡಿದು,
ಲಲ್ಲೆಯಿಂದ ತೊದಲಿ ನುಡಿದು,
ಕೆಳೆಯರೊಡನೆ ಬೆಳೆದು ಬಂದ
ಮಾತದಾವುದು-

ನಲ್ಲೆಯೊಲವ ತೆರೆದು ತಂದ
ಮಾತದಾವುದು-

ಸವಿಯ ಹಾಡ, ಕಥೆಯ ಕಟ್ಟಿ,
ಕಿವಿಯಲೆರೆದು, ಕರುಳ ತಟ್ಟಿ,
ನಮ್ಮ ಜನರು, ನಮ್ಮ ನಾಡು,
ಎನಿಸಿತಾವುದು-

ನಮ್ಮ ಕವಿಗಳೆಂಬ ಕೋಡು
ತಲೆಗದಾವುದು-

ಕನ್ನಡ ನುಡಿ ನಮ್ಮ ಹೆಣ್ಣು,
ನಮ್ಮ ತೋಟದಿನಿಯ ಹಣ್ಣು ;
ಬಳಿಕ, ಬೇರೆ ಬೆಳೆದ ಹೆಣ್ಣು
ಬಳಿಗೆ ಸುಳಿದಳು ;

ಹೊಸದು ರಸದ ಬಳ್ಳಿಹಣ್ಣು
ಒಳಗೆ ಸುಳಿದಳು.

ಪಡುವ ಕಡಲ ಹೊನ್ನ ಹೆಣ್ಣು,
ನನ್ನ ಜೀವದುಸಿರು, ಕಣ್ಣು,
ನಲಿಸಿ, ಕಲಿಸಿ, ಮನವನೊಲಿಸಿ
ಕುಣಿಸುತಿರುವಳು ;

ಒಮ್ಮೆ ಇವಳು, ಒಮ್ಮೆ ಅವಳು,
ಕುಣಿಸುತಿರುವಳು.

ಹೀಗೆ ನನಗೆ ಹಬ್ಬವಾಗಿ,
ಇನಿಯರಿಬ್ಬರನ್ನು ತೂಗಿ

ಇವಳ ಸೊಬಗನವಳು ತೊಟ್ಟು,
ನೋಡಬಯಸಿದೆ;
ಅವಳ ತೊಡಿಗೆ ಇವಳಿಗಿಟ್ಟು
ಹಾಡ ಬಯಸಿದೆ.
ಬಲ್ಲವರಿಗೆ ಬೆರಗೆ ಇಲ್ಲಿ?
ಅರಿಯದವರು ನಾಲ್ವರಲ್ಲಿ
ಕಳೆಯ ಬೆಳಕು ಹೊಳೆಯಲೆಂದು
ದಣಿದು ಹೋದೆನು.
ಬಡವನಳಿಲು ಸೇವೆಯೆಂದು
ಧನ್ಯನಾದೆನು.

ಶ್ರೀ

## ೨. ಸ್ವಾಗತ

(ಮೈಸೂರಿಗೆ)

ಗೆಳೆಯ ಕನ್ನಡಿಗರೇ, ಸ್ವಾಗತವು ನಿಮಗೆ!
ಬೆಳೆವ ಸಿರಿಗನ್ನಡದ ಬಳ್ಳಿ ಪಡೆದರಳುಗಳೆ,
ಸ್ವಾಗತವು ನಿಮಗೆ!

ಒಬ್ಬ ಕನ್ನಡ ದೇವಿಯುದರದಿಂದೊಗೆದು,
ಒಬ್ಬ ಕನ್ನಡ ಜನನಿಯೆದೆಹಾಲ ಮೊಗೆದು,
ಒಬ್ಬ ಮಾತೆಯ ಮಡಿಲು ತೊಡೆಗಳಲಿ ಕುಣಿದು,
ಒಬ್ಬ ತಾಯುಲಿಗಳನೆ ತೊದಲಿ ನುಡಿದು,
ಬೆಳೆದ ಕನ್ನಡಿಗರೇ, ಬಂಧು ಕನ್ನಡಿಗರೇ,
ಇನಿಯ ಕನ್ನಡಿಗರೇ, ಸ್ವಾಗತವು ನಿಮಗೆ!

ಪಡುಗಡಲ ತೆರೆ ಮೊಳಗಿ, ಹಲವು ಹೊಳೆಗಳು ಮಿನುಗಿ,
ಸೊಬಗು ಸುಳಿಯುವ, ಸುಖದ ಬೀಡಿನಿಂದ,
ತುಳು ನೆರೆಯ ನಾಡಿನಿಂದ-
ಕನ್ನಡದ ಕಲಿಗಳನು, ಕನ್ನಡದ ಕವಿಗಳನು

ತನ್ನ ಬಸಿರಲಿ ಮುನ್ನ ಹೊರೆದು, ಜಗದಲಿ ಮೆರೆದು
ಮತ್ತೆ ಮಿಗುವುತ್ಸಹದ ಕೊಯಲಿನಿಂದ,
ಬೆಳವಲದ ಬಯಲಿನಿಂದ-
ವನದೇವಿ ಜಲದೇವಿಯರಿಗೆ ತೌರೂರೆನಿಸಿಕ್ಕಿಸುವ
ಜನದ ಕಣ್ ಮನಗಳನು ಸೆಳೆದು ಸೆರೆಸಿಕ್ಕಿಸುವ
ಪ್ರಕೃತಿರಚನೆಯ ಬೆಗಡು ಬೆಡಗಿನಿಂದ,
ಮಲೆನಾಡು ಕೊಡಗಿನಿಂದ-
ಹೆರರು ಕೊಡುವಟ್ಟುಳಿಗೆ ಹಿಮ್ಮೆಟ್ಟದೆಯೆ ನಿಂತು
ಸಿರಿಗನ್ನಡ ಧ್ವಜವನೆತ್ತಿ ಮೆರೆಯಿಸುತಿರುವ
ಗಂಡುಮೆಟ್ಟಿನ ನೆಲದ ತಡಿಗಳಿಂದ,
ಕನ್ನಡದ ಗಡಿಗಳಿಂದ-
ಬಂದಿಹಿರಿ, ಬಂದಿಹಿರಿ ಕನ್ನಡದ ಮಣಿಗಳಿರ,
ಬಂದಿಹಿರಿ, ಕನ್ನಡದ ದೇವಿಯಾರಾಧನೆಗೆ,
ಇಂದು ಸ್ವಾಗತವು ನಿಮಗೆ!
ತಂದಿಹಿರಿ ನೀವಿಂದು ಹೊಸದೊಂದು ಭಾಗ್ಯವನು
ಈ ನಮ್ಮ ಮೈಸೂರಿಗೆ!
ಬೆಟ್ಟ ತುದಿಯಲಿ ನಿಂತು ಬೆಳಗೆ ದೆಸೆದೆಸೆಗೆ,
ಭಕ್ತರಳಲೆಲ್ಲವನು ತುಳಿದು ನೆಲದಡಿಗೆ,
ಒಲುಮೆಯಲಿ ನಲುಮೆಯಲಿ ಚಾಮುಂಡಿದೇವಿ,
ಕನ್ನಡಿಗರಧಿದೇವಿ ಶುಭಗಳನು ತೀವಿ
ಕಾಯುತಿರುವೀ ನಮ್ಮ ಮೈಸೂರಿಗೆ,
ಇಂದು ಸ್ವಾಗತವು ನಿಮಗೆ!
ಕನ್ನಡದ ರಸಿಕತೆಗೆ ತಾನು ನೆಲೆಯೆನಿಸಿ,
ಕನ್ನಡದ ನಲ್ನುಡಿಗೆ ಮನ್ನಣೆಯ ಸಲಿಸಿ,
ಕೃಷ್ಣಪ್ರಭುವಾಳುವೀ ಮೈಸೂರಿಗೆ,
ಇಂದು ಸ್ವಾಗತವು ನಿಮಗೆ!
ಇಲ್ಲಿ ಕೆರೆ, ಅಲ್ಲಿ ಗಿರಿ; ಎಲ್ಲೆಲ್ಲಿ ನೋಡಿದರೆ
ಅಲ್ಲಲ್ಲಿ ತಂಪೆರಚುವುಪವನಗಳು,
ಬನ್ನಿ, ವಿಶ್ರಮಿಸಿಕೊಳಿ, ಬಳಲಿಕೆಯ ಹರಿಸಿಕೊಳಿ-
ಎಂದು ಅದೋ ಕರೆಯುತಿಹುವು!
ತನ್ನಂತರಂಗವನು ತೆರೆದು ತೋರಿಸಿ ಬೆಳಗಿ
ತನ್ನ ನಲವನು ನಿಮಗೆ ಪುರವರುಹುವಂತಿರುವ

ಉರಿವ ದೀಪದ ಹಿರಿಯ ಬೀದಿಯ ಸಾಲು
ಸ್ವಾಗತವ ಬಯಸುತಿಹುದು ! -ನಿಮಗಿದೋ
ಮೈಸೂರು ಬಯಸುತಿಹುದು !
ಕನ್ನಡದ ಸೇವೆಯಲಿ ನುರುಗಿ ಹಣ್ಣಾದವರೆ,
ಹಿರಿಯ ಕನ್ನಡ ಧೀರರೆ,
ಕನ್ನಡದ ಮೇಲ್ಮೆಯಾ ಕನಸ ನನಸಾಗಿಸುವ
ತರುಣ ಕನ್ನಡ ವೀರರೇ
ಕನ್ನಡದ ಸೊಂಪು ಸವಿಯುಗುವ ರಸ ಕಾವ್ಯಗಳ
ಬರೆವ, ಬರೆಯಿಸುತಿರುವ ಸುಂದರಿಯರೇ,
ಆರ್ಯ ಮಹಿಳೆಯರೇ,
ಸ್ವಾಗತವು ನಿಮಗಿಂದು ಮೈಸೂರಿಗೆ !

ನಾವೆಲ್ಲರೊಡಗೂಡಿ, ಒಡನಾಡಿ ಕಲೆತು,
ಕನ್ನಡದ ಸೇವೆಯಲಿ ನಮ್ಮ ಮೈಮರೆತು,
ಕುಂದು ಕೊರತೆಗಳೊಂದಕಿಂಬಿಲ್ಲದಂತೆ,
ನಮ್ಮ ಸಖ್ಯದ ಮೊಗ್ಗು ಬಿರಿದರಳುವಂತೆ,
ದೇವಿ ಕರುಣಿಸಲಿ ವರವ ! -ಕನ್ನಡದ
ದೇವಿ ಕೈಕೊಳಲಿ ಫಲವ !

ಕನ್ನಡಿಗ ಸೋದರರೆ, ಸ್ವಾಗತವು ನಿಮಗೆ ;
ಕನ್ನಡದ ಸಿರಿಬಳ್ಳಿ ಹೊಮ್ಮಿಸಿರುವರಳುಗಳೇ,
ಇಂದು ಸ್ವಾಗತವು ನಿಮಗೆ ! -ನಿಮಗಾಗಿ
ಕಾದಿರುವ ಮೈಸೂರಿಗೆ ?

ತೀ. ನಂ. ಶ್ರೀಕಂಠ

## ೩. ಮೈಸೂರು ಮಕ್ಕಳು

ನಿಮ್ಮ ನಾಡಾವುದು ?
ಮೈಸೂರು.
ನಿಮ್ಮೂರದಾವುದು ?
ಮೈಸೂರು.

ಕನ್ನಡದ ಕಣ್ಣದು,
ಮೈಸೂರು,
ನಾಲುವಡಿ ಕೃಷ್ಣನ
ಮೈಸೂರು.
ಅಲ್ಲೆಲ್ಲಿ ನೋಡಿದರು ಬಾನ ಕರೆಯಲಿ ಹುದುಗಿ ಕಾರ ಮುಗಿಲಂತಿಹುವು ಬೆಟ್ಟ ಹಬ್ಬಿ;
ತೆರೆ ಎದ್ದು ಬಿದ್ದು ಬಹ ಬಯಲಲ್ಲಿ ಹಳ್ಳಿಗಳು, ತಾವರೆಯ ಕೆರೆ, ತೋಟ,
ಹೊಲದ ಹಸುರು;
ಕಾಡಿನಲಿ ನುಸಿಯುತ್ತ, ಕಲ್ಲಿನಲಿ ಮೊರೆಯುತ್ತ, ಮರಳಿನಲಿ ಸುಳಿಸುಳಿದು,
ಸರಿಯ ಧುಮುಕಿ:
ಪಯಿರುಗಳ ಬದುಕಾಗಿ, ಹೊಳಲುಗಳ ಬೆಳಕಾಗಿ, ಕಣ್ಣುಗಳ ಬೆರಗಾಗಿ
ಹರಿವ ಹೊನಲು.
ಅಲ್ಲಿ ಅಲೆಯಲೆಯಾಗಿ ಬಂದು, ನೆಲೆ ನೆಲೆಯಾಗಿ ನಿಂದು, ಹಲತೆರದಿಂದ
ನುಡಿದು, ನಡೆದು,
ಕಡೆಗೆ ನಾಡೊಂದೆಂದು, ದೊರೆಯೊಬ್ಬ ನಮಗೆಂದು, ಬಾಳ ಬೆಲೆ ಹುದುವೆಂದು
ಕಲಿತು, ಕಲೆತು,
ಜಾಣಿನಲಿ, ಚೆಲುವಿನಲಿ, ಸೊಗಸಿನಲಿ, ನಯದಲೌದಾರ್ಯದಲಿ, ಕಾರ್ಯದಲಿ
ಕಳಶವೆನಿಸಿ,
ಮೆರೆಯುತಿಹ ಜನವ ನಾನೇನೆಂಬೆ, ಎಂತು ನಾ ಕನ್ನಡಿಗರೈಸಿರಿಯ ಬಣ್ಣಿಸುವೆನು.
ಚಿನ್ನದ ನಾಡದು,
ಮೈಸೂರು.
ಗಂಧದ ಗುಡಿಯದು,
ಮೈಸೂರು.
ವೀಣೆಯ ಬೆಡಗದು,
ಮೈಸೂರು.
ನಾಲುವಡಿ ಕೃಷ್ಣನ
ಮೈಸೂರು.
ಅಲ್ಲೊಬ್ಬ ನಮಗಿಹನು ನಾಯಕನು; ಭಕ್ತಿಯಲಿ ನಿಲು ನಿಲುಕಿ ಕಣ್‌ತುಂಬ
ನೋಡುತಿರಲು,
ಆಸೆಯಂಬಾರಿಯಲಿ ನಸುನಗೆಯುಸಿಕ್ಕೆಲಕೆ ಬೀರಿ, ಜನರಕ್ಕರೆಯನುಕ್ಕಿಸುವನು.
ಧೀರನಾತನು; ತುಂಬು ಗಾಂಭೀರ್ಯದಲಿ ಸತ್ಯವನೆ ಎತ್ತಿ ನಿಲಿಸುವನು
ಪ್ರಜೆಯ ತಂದೆ;

ಮರೆತು ತನ್ನನು ರಾಜ್ಯಸೇವೆಯಲಿ, ಸಲಿಸುವನು ಧರ್ಮವನು ರಾಜರ್ಷಿ
ಕರ್ಮಯೋಗಿ.
ಬನ್ನಿ ಕೆಳೆಯರ, ನಮ್ಮ ಬಾಳಿಕೆಯು ಕಾಣಿಕೆಯನೊಪ್ಪಿಸುವ, ಕೈಕೊಳುವ
ದೊರೆಯ ಗುರಿಯ :
ನೋಹಿಯಾತನದು-ತನ್ನರಮನೆಯ ಹಸಗೆಯ್ಪು ಬೆಳಗಿದಂತೆಯೆ, ಬೆಳಗಿ
ಊರ, ನಾಡ
ಹಸಗೆಯ್ವೆ, ಹೊಸಗೆಯ್ವೆನೆಂಬೊಲುಮೆ ; ನಾವೆಲ್ಲರಾನಾಯಕನ ದಳದಿ
ದೀಕ್ಷೆ ಪಡೆದು,
ಮೀರಿ ಬಳಸುವ ಬನ್ನಿ ಬುದ್ಧಿಯನು ಶ್ರದ್ಧೆಯನು, ಕನ್ನಡಿಗರೈಸಿರಿಯ
ಬೆಳೆಯ ಬೆಳಸಿ.

ಬೆಳೆಯುವ ನಾಡದು,
ಮೈಸೂರು.
ಇಳೆಯ ಮಾದರಿಯದು
ಮೈಸೂರು.
ಕನ್ನಡಿಗನುಸಿರದು,
ಮೈಸೂರು.
ನಾಲುಮಡಿ ಕೃಷ್ಣನ
ಮೈಸೂರು.

ಶ್ರೀ

## ೪. ಸ್ವಾಗತ

(ಹೈದರಾಬಾದಿಗೆ)

ಈ ನಮ್ಮ ನಾಡಿಂಗೆ ಓಡಿಬನ್ನಿ,
  ನಿಮ್ಮವರ ನೋಡಬನ್ನಿ.
ಕಕ್ಕುಲತೆಯಿಂದ ಮಾತಾಡಬನ್ನಿ,
  ಎಮ್ಮೊಡನೆ ಕೂಡಬನ್ನಿ,
ತುಂಗನಾಳಿದ ತಿರುಳುಗನ್ನಡದ ನಾಡು
  ದಾಸರಿಂ ಪಾವನತೆಯೊಂದಿದೀ ನಾಡು,
ಇಕ್ಕೆಲದ ಸೆಳತಕ್ಕೆ ಸೀಳಾಗಿ ಪಾಡು
  ಪಿಂಗಡಿಸಿ ಹೇಗಾಗಿ ಹೋಗಿಹುದು ನೋಡು.

ಕಳೆದುದಕೆ ಅಳುತಳುತ ಕುಳಿತು ಫಲವೇನು ?
ಮೊಳೆತಿರಲು ತನ್ನರಿವು ಸಾಲದೇನು ?
ಮೊಳಕೆ ಕಮರದ ತೆರದಿ ಮಳೆಗರೆದು ನೀನು,
ಪಾಲಿಸೈ, ಲಾಲಿಸೈ, ಕೇಳಲಿನ್ನೇನು ?
ಬಿಸಿಲ ಬೇಗೆಗೆ ಬೆಂದು ಬಾಡುತಿದೆ ನಾಡು.
ಆಚಾರ್ಯ ನಿನಗೆ ಮರೆಹೊಗುತಲಿದೆ ಕಾಡು
ಬೇಗ ಬಾ, ಬೇಗ ಬಾ, ಬಂದು ಕಾಪಾಡು.
ಶುಷ್ಕಹೃದಯಕೆ ತಂಪ-ಕಂಪ-ನೀಡು.
ಮಂದಮಾರುತವಾಗಿ ತೇಲಿ ಬಾರೈ
ಹರಿವ ಹೊಳೆಯಾಗಿ ನೀ ಸಾಗಿ ಬಾರೈ
ಭೋರ್ಗರೆವ ಮಳೆಯಾಗಿ ಮೊರೆದು ಬಾರೈ
ನಿನಗೆ ಸುಸ್ವಾಗತವು ಗುರುವೆ ಬಾರೈ.

ಜಿ. ಕೆ. ಪ್ರಾಣೇಶಾಚಾರ್ಯ

## ೫. ಕನ್ನಡ ನುಡಿ

ಎನಿತು ಇನಿದು ಈ ಕನ್ನಡ ನುಡಿಯು
ಮನವನು ತಣಿಸುವ ಮೋಹನ ಸುಧೆಯು !
ಗಾನವ ಬೆರೆಯಿಸಿ
ವೀಣೆಯು ದನಿಯೊಳು
ವಾಣಿಯ ನೇವುರ
ನುಡಿಸುತೆ ಕುಣಿಯಲು
ಮಾಣದೆ ಮೆರೆಯುವ ಮಂಜುಲ ರವವೋ ?
ಎನಿತು ಇನಿದು ಈ ಕನ್ನಡ ನುಡಿಯು !
ರಂಗನ ಮುರಲಿಯು
ಹಿಂಗದ ಸರದಲಿ
ಹೆಂಗಳೆಯರು ಬೆಳ
ದಿಂಗಳಿನಿರುಳಲಿ
ಸಂಗೀತವನೊರೆದಂಗವಿದೇನೋ ?
ಎನಿತು ಇನಿದು ಈ ಕನ್ನಡ ನುಡಿಯು !

ಗಿಳಿಗಳು ಉಲಿಯುವ
ಮೆಲುಮಾತುಗಳೋ ?
ಕಳಕಂಠಗಳಾ
ಚೆಲುವಿನ ಕುಕಿಲೊ ?
ಅಳಿಗಳ ಬಳಗದ ಬೆಳಗಿನ ಉಲಿಯೋ ?
ಎನಿತು ಇಸಿದು ಈ ಕನ್ನಡ ನುಡಿಯು !

**ಆನಂದಕಂದ**
(ಕೃಷ್ಣಶರ್ಮ ಬೇಟಗೇರಿ)

## ೬. ಕನ್ನಡ

ತನ್ನದು ಎಂಬುದು ಏನಿಲ್ಲೆ
ಕನ್ನಡ ನುಡಿಯಲಿ ಹುರುಳಿಲ್ಲೆ ? ॥ ಪ ॥
ಮಾನವ ಜಾತಿಯ ಜೀವಾಳ । ಭಾಷಾದೇವಿಯೊಳಿಲ್ಲೇನು ?
ಏನಿದು ? ಐಕ್ಯದ ನಿಜಬೀಜ । ತಾಯ್ನುಡಿಯೊಲವಿನೊಳಿಲ್ಲೇನು ?
ಉನ್ನತ ಸಂಸ್ಕೃತಿಯೊಳಬೆಳಸು । ಕನ್ನಡ ತಾಯಿಗೆ ಇಲ್ಲೇನು ?
ಜೀವಕೆ ಜೀವವ ಬೆರೆಸುತಿಹ
ಭಾವದ ಬೆಳಗನು ಬೀರುತಿಹ
ಸಾವಿಲ್ಲದೊಲವನುಣಿಸುತಿಹ
ತನ್ನಯ ಭಾಷೆಯೆ ತನಗಲ್ಲೆ ; । ಅಂತಹ ಭಾಷೆಯು ನಮಗಿಲ್ಲೆ ?
ನನ್ನೀ ಭಾಷೆಯ ನಂದನದಿ । ಸೊಗಸಿನ ಝರಿಗಳು ಹರಿದಿಲ್ಲೆ ?
ಕನ್ನಡದಿನಿನುಡಿಗಡಲೊಳಗೆ । ವಿದ್ಯೆಯ ನದಿಗಳು ಕೂಡಿಲ್ಲೆ ?
ಸನ್ನುತ ನಾಡಿನ ಗೂಡಿನಲಿ । ಧಾರ್ಮಿಕ ಶುಕಗಳು ಜನಿಸಿಲ್ಲೆ ?
ಕವಿಕೋಕಿಲಗಳು ಉಲಿದಿಲ್ಲೆ ?
ಸವಿಯರಸಂಚೆಯು ಚರಿಸಿಲ್ಲೆ ?
ನವ ಸಾಧುವೃಕ್ಷ ಮೊಳೆತಿಲ್ಲೆ ?
ನನ್ನಿಯ ಮೇಘವು ಕರೆದಿಲ್ಲೆ ? । ಬನ್ನದ ಬೀಜವು ಹುರಿದಿಲ್ಲೆ ?
ಗರ್ವದ ರಾವಣನಳಲಿಸಿದಾ । ಹನುಮಂತನಾವ ನುಡಿಗುಡಿಯು
ಪೂರ್ವದ ಹರ್ಷನ ಸೋಲಿಸಿದಾ । ಪುಲಿಕೇಶಿ ಯಾವ ನುಡಿಗುಡಿಯು
ಓರ್ವಳೆ ಶಿವರಾಜನ ತಡೆದಾ । ಮಲ್ಲವ್ವನಾವ ನುಡಿಗುಡಿಯು

ಕನ್ನಡಿಗರ ಕರವೀರರವು
ಕನ್ನಡಿಗರ ಶಿರಚದುರರವು
ಕನ್ನಡಿಗರ ಉರಭಕ್ತರವು
ಕನ್ನಡ ಕಸ್ತುರಿ ಕಂಪಲ್ಲೆ ? | ಕನ್ನಡಿಗರ ಸಿರಿ ಮೆರೆದಿಲ್ಲೆ ?

**ಹನುಮಂತ ಗೋವಿಂದ ಕಟ್ಟಿ**

## ೭. ಕನ್ನಡ್ ಪದಗೊಳು

ಯೆಂಡ ಯೆಡ್ತಿ ಕನ್ನಡ್ ಪದಗೊಳ್
ಅಂದ್ರೆ ರತ್ನಂಗ್ ಪ್ರಾಣ !
ಬುಂಡೇನ್ ಎತ್ತಿ ಕುಡುದ್ಬುಟ್ಟಾಂದ್ರೆ-
ತಕ್ಕೊ ! ಪದಗೊಳ್ ಬಾಣ !

ಬಗವಂತ್ ಏನ್ರ ಭೂಮಿಗ್ ಇಳದು
ನನ್ ತಾಕ್ ಬಂದಾಂತ್ ಅನ್ನು ;
ಪರ್‌ಗಿರೀಕ್ಸೆ ಮಾಡ್ತಾನ್ ಔನು-
ಬಕ್ತನ್ ಮೇಲ್ ಔನ್ ಕಣ್ಣು !

' ಯೆಂಡ ಕುಡಿಯಾದ್ ಬುಟ್‌ಬುಡ್ ರತ್ನ ! '
ಅಂತ್ ಔನ್ ಏನಾರ್ ಅಂದ್ರೆ-
ಮೂಗ್ ಮೂರ್ ಚೂರಾಗ್ ಮುರುಸ್ಕೊಂತೀನಿ
ದೇವರ್ ಮಾತ್ಗ್ ಅಡ್ಬಂದ್ರೆ !

' ಯೆಂಡ ಬುಟ್ಟೆ ಯೆಡ್ತೀನ್ ಬುಟ್‌ಬುಡ್ ! '
ಅಂತ್ ಔನ್ ಏನಾರ್ ಅಂದ್ರೆ
ಕಳದೋಯ್ತು ಅಂತ ಕುಣದಾಡ್ತೀನಿ
ದೊಡ್ಡ್ ಒಂದ್ ಕಾಟ ! ತೊಂದ್ರೆ !

' ಕನ್ನಡ್ ಪದಗೊಳ್ ಆಡೋದ್ನೆಲ್ಲ
ನಿಲ್ಲೀಸ್ ಬುಡಬೇಕ್ ರತ್ನ ! '
ಅಂತ್ ಔನ್ ಅಂದ್ರೆ-ದೇವ್ರ್ ಆದ್ರ್ ಏನು !
ಮಾಡ್ತೀನ್ ಔನ್ಗೆ ಖತ್ನ !

ಆಗ್ನೆಮಾಡೋ ಐಗೊಳ್ ಎಲ್ಲಾ
ದೇವ್ರೆ ಆಗ್ಲಿ-ಎಲ್ಲ !

ಕನ್ನಡ್ ಸುದ್ದೀಗ್ ಏನ್ರ ಬಂದ್ರೆ
ಮಾನಾ ವುಳಸಾಕಿಲ್ಲ !

ನರಕಕ್ ಇಳ್ಸಿ ನಾಲ್ಗೆ ಸೀಳ್ಸಿ
ಬಾಯ್ ಒಲಿಸಾಕಿದ್ರೂನೆ-
ಮೂಗ್ನಲ್ ಕನ್ನಡ್ ಪದವಾಡ್ತೀನಿ !
ನನ್ ಮನಸನ್ ನೀ ಕಾಣೆ !

ಯೆಂಡ ಓಗ್ಲಿ ! ಯೆಡ್ತಿ ಓಗ್ಲಿ !
ಎಲ್ಲಾ ಕೊಚ್ಕೊಂಡ್ ಓಗ್ಲಿ !
ಪರ್ಪಂಚ್ ಇರೋತನಕ ಮುಂದೆ
ಕನ್ನಡ್ ಪದ್ಗೊಳ್ ನುಗ್ಲಿ !

**ರತ್ನ**
**(ಜಿ. ಪಿ. ರಾಜರತ್ನಂ)**

## ೮. ಕನ್ನಡಿಗನ ಕೊರಗು

ಸೊಕ್ಕಿನಲಿ ತಲೆಯೆತ್ತಿ ಜೊತೆಯವರ ಕೂಟದಲಿ,
ನಾವು ಸಮ ನಿಮಗೆಂದು ನುಡಿವ ಬಲವಿಲ್ಲ !
ಮಿಕ್ಕವರು ಕಡೆಗಣಿಸಿ ನೂಕಿದಾ ಕಡೆ ಬಿದ್ದು,
ಯಾವ ಮಂಕೋ ಕವಿದು ಹುದುಗಿರುವೆವಲ್ಲ ?
ರೊಕ್ಕ ಕೈಯೊಳಗಿಲ್ಲ, ಹುರುಡು ಮೈಯೊಳಗಿಲ್ಲ,
ಹೆಮ್ಮೆಯೊಂದನು ನೆಚ್ಚಿ ದೆಸೆಗೆಟ್ಟೆವಲ್ಲ !
ಅಕ್ಕತಂಗಿಯರೆಲ್ಲ ಮುಂದು ಮುಂದಾಗಿರಲು
ನಮ್ಮ ತಾಯೊಬ್ಬಳೇ ಸೊರಗಿರುವಳಲ್ಲ !
ಅಮ್ಮನನು ಕೈಬಿಡದೆ ಇನ್ನು ಮೆರೆಸುವೆವೆ ?
ಹಿರಿಯ ಹೆಸರನು ತಿರುಗಿ ಗಳಿಸಿಕೊಳ್ಳುವೆವೆ ?
ಸರಿಯವರ ತಲೆಮೆಟ್ಟಿ ಮುಂದೆ ನಿಲ್ಲುವೆವೆ ?
ನೆಮ್ಮದಿಯ ಬೆಳಕಿನಲಿ ನಾವು ಬಾಳುವೆವೆ ?

**ತೀ. ನಂ. ಶ್ರೀಕಂಠಯ**

## ೯. ರಕ್ಷಿಸು ಕರ್ನಾಟಕ ದೇವಿ

ರಕ್ಷಿಸು ಕರ್ಣಾಟಕ ದೇವಿ, ಸಂ || ಪ ||
ರಕ್ಷಿಸು ಕರ್ಣಾಟಕ ದೇವೀ

ಕದಂಬಾದಿ ಸಂಪೂಜಿತ ಚರಣೆ
ಗಂಗಾರಾಧಿತ ಪದನಖ ಸರಣೆ
ಗಂಗಾರಾಧಿತ ಪೆದನಖ ಸರಣೆ
ಚಲುಕ್ಯರುತ್ತಮ ಕಾಂಚೀ ಕಿರಣೆ
ರಾಷ್ಟ್ರಕೂಟ ಮಣಿಕಂಠಾಭರಣೆ
ಚಾಲುಕ್ಯಾಂಶುಕ ಶೋಭಾವರಣೆ.

ಯಾದವಮಣಿ ಕಂಕಣಾಂಶು ಸುಂದರಿ
ಬಲ್ಲಾಳರ ಭುಜಭೂಷಣ ಬಂಧುರೆ
ವಿಜಯನಗರ ಮಂಗಲಮಣಿ ಕಂಧರೆ
ಮೈಸೂರೊಡೆಯರ ಸುಕೀರ್ತಿಮಂದಿರೆ
ಮಾಂಡಲಿಕಾವನ ಭಾರಧುರಂಧರೆ.

ಮತ ಸುಸ್ಥಾಪಕ ಸ್ಥಾಪಿತಪ್ರಾಣೆ
ಶಿಲ್ಪಕಲಾಮಂಟಪ ಸುಸ್ಥಾನೆ
ಕವಿಜನ ಕೀರ್ತಿತ ಸುಯಶಸ್ತ್ರಾಣೆ
ಸಾಧು ಸತ್ಕಥಾ ಭೇರೀಧ್ವಾನೆ
ಸ್ವೇತಿಹಾಸನೀರಾಜನ ರಾಣಿ.

ಶಾಂತಕವಿ

## ೧೦. ಕನ್ನಡಿಗರ ತಾಯಿ

ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ !
ಹರಸು ತಾಯೆ ಸುತರ ಕಾಯೆ, ನಮ್ಮ ಜನ್ಮದಾತೆಯೆ !

ನಮ್ಮ ತಪ್ಪನೆನಿತೊ ತಾಳ್ವೆ,
ಅಕ್ಕರೆಯಿಂದೆಮ್ಮನಾಳ್ವೆ ;
ನೀನೆ ಕಣಾ ನಮ್ಮ ಬಾಳ್ವೆ,
ನಿನ್ನ ಮರೆಯಲಮ್ಮೆವು-

ತನು ಕನ್ನಡ, ಮನ ಕನ್ನಡ, ನುಡಿ ಕನ್ನಡವೆಮ್ಮವು.

ಹಣ್ಣನೀವ ಕಾಯನೀವ ಪರಿಪರಿಯ ಮರಂಗಳೊ,
ಪತ್ರಮೀವ ಪುಷ್ಪಮೀವ ಲತೆಯ ತರತರಂಗಳೊ,
ತೆನೆಯ ಕೆನೆಯ ಗಾಳಿಯೊ,
ಖಗಮೃಗೋರಗಾಳಿಯೊ,
ನದಿ ನಗರ ನಗಾಳಿಯೊ !
ಇಲ್ಲಿಲ್ಲದುದುಳಿದುದೆ ?-
ಜೇನು ಸುರಿವ ಹಾಲು ಹರಿವ ದಿವಂ ಭೂಮಿಗಿಳಿದುದೆ ?

ಬುಗರಿಯೀಯೆ ಶಬರಿ ಕಾಯೆ ರಾಮನಿಲ್ಲಿ ಬಂದನೆ ?
ಕನ್ನಡ ದಳ ಕೂಡಿಸಿ ಖಳ ದಶಾಸ್ಯನಂ ಕೊಂದನೆ ?
ಪಾಂಡವರಜ್ಞಾತಮಿದ್ದ,
ನಲಲಂ ಕೀಚಕನ ಗೆದ್ದ;
ಕುರುಕುಲಮುಂಗದನ ಮೆದ್ದ
ನಾಡು ನೋಡಿದನಲ್ಲವೇ ?
ನಂದನಂದನನಿಲ್ಲಿಂದ ಸಂದಿಗಯ್ದನಲ್ಲವೇ ?

ಶಕವಿಜೇತನಮರ ಶಾತವಾಹನಾಖ್ಯನೀ ಶಕಂ
ನಿನ್ನೊಳಂದು ತೊಡಗಿ ಸಂದುದರ್ಧ ಭರತದೇಶಕಂ !
ಚಳುಕ್ಯ ರಾಷ್ಟ್ರಕೂಟರೆಲ್ಲಿ,
ಗಂಗರಾ ಕದಂಬರೆಲ್ಲಿ,
ಹೊಯ್ಸಳ ಕಳಚುರ್ಯರೆಲ್ಲಿ,
ವಿಜಯನಗರ ಭೂಪರು
ಆಳ್ದರಿಲ್ಲಿಯಲ್ಲದೆಲ್ಲಿ ತಾಯೆ ಮೇಣಲೂಪರು ?

ಜೈನರಾದ ಪೂಜ್ಯಪಾದ ಕೊಂಡಕುಂದವರ್ಯರ
ಮಧ್ವಯತಿಯೆ ಬಸವಪತಿಯೆ ಮುಖ್ಯಮತಾಚಾರ್ಯರ
ಶರ್ವ ಪಂಪ ರನ್ನರ,
ಲಕ್ಷ್ಮೀಪತಿ ಜನ್ನರ
ಷಡಕ್ಷರಿ ಮುದ್ದಣರ,
ಪುರಂದರವರೇಣ್ಯರ
ತಾಯೆ, ನಿನ್ನ ಬಸಿರೆ ಹೊನ್ನಗನಿ ವಿದ್ಯಾರಣ್ಯರ !

ಹಳೆಯಬೀಡ ಬೇಲನಾಡ ಮಾಡಮೆನಿತೊ ಸುಂದರಂ !
ಬಿಳಿಯ ಕೊಳದ ಕಾರಕಳದ ನಿಡುಕರೆನಿತೊ ಬಂಧುರಂ !

ಇಲ್ಲಿಲ್ಲದ ಶಿಲ್ಪವಿಲ್ಲ;
ನಿನ್ನ ಕಲ್ಲೆ ನುಡಿವುದಲ್ಲ!
ಹಿಂಗತೆಯಿನಿವಾಲ ಸೊಲ್ಲ
ನಮ್ಮ ತೃಷೆಗೆ ದಕ್ಕಿಸು-
ಹೊಸತು ಕಿನ್ನರಿಯಲಿ ನಿನ್ನ ಹಳೆಯ ಹಾಡನುಕ್ಕಿಸು!

ಆರ್ಯರಿಲ್ಲಿ ಬಾರದಲ್ಲಿ ಬಾಸೆ ಎಲ್ಲಿ ಸಕ್ಕದಂ?
ನಿನ್ನ ನುಡಿಯನಚ್ಚು ಪಡಿಯನಾಂತರೆನಿತೊ ತಕ್ಕುದಂ?
ಎನಿತೊ ಹಳೆಯ ಕಾಲದಿಂದ
ಬರ್ದಿಲವೀ ಬಾಸೆಯಿಂದ
ಕಾಲನ ಮೂದಲಿಸಿ ನಿಂದ
ನಿನಗೆ ಮರವೆ ಹೊದೆವುದೆ?
ನಿನ್ನ ನುಡಿಗೆ ನಿನ್ನ ನಡೆಗೆ ಮುದುಪುಮೆಂದುಮೊದೆವುದೆ?

ತನ್ನ ಮರೆಯ ಕಂಪನರಿಯದದನೆ ಹೊರಗೆ ಹುಡುಕುವ
ಮೃಗದ ಸೇಡು ನಮ್ಮ ಪಾಡು ಪರರ ನುಡಿಗೆ ಮಿಡುಕುವ!
ಕನ್ನಡ ಕಸ್ತೂರಿಯನ್ನ
ಹೊಸತುಸಿರಿಂ ತೀಡಿದನ್ನ
ಸುರಭಿ ಎಲ್ಲಿ? ನೀನದನ್ನ
ನವಶಕ್ತಿಯನೆಬ್ಬಿಸು-
ಹೊಸ ಸುಗಂಧದೊಸಗೆಯಿಂದ ಜಗದಿ ಹೆಸರ ಹಬ್ಬಿಸು!

ನಿನ್ನ ಪಡೆಯ ಕತೆಯ ಕಡೆಯ ನುಡಿಯೆ ತಾಳಿಕೋಟೆಯು?
ಕಡಲಿನೊರತೆಗೊಳವೆ ಕೊರತೆ? ಬತ್ತದು ನಿನ್ನೂಟೆಯು!
ಸೋಲಗೆಲ್ಲವಾರಿಗಿಲ್ಲ?
ಸೋತು ನೀನೆ ಗೆದ್ದೆಯಲ್ಲ?
ನಿನ್ನನಳಿವು ತಟ್ಟಲೊಲ್ಲ!-
ತಾಳಿಕೋಟೆ ಸಾಸಿರಂ
ಬಾಹುಬಲದಿ ಮನೋಬಲದಿ ತಾಯೆ ಗೆಲುವೆ ಭಾಸುರಂ!

ಕುಗ್ಗದಂತೆ ಹಿಗ್ಗಿಪಂತೆ ನಿನ್ನ ಹೆಸರ ಟೆಕ್ಕೆಯಂ,
ನೀಗದಂತೆ ಸಾಗಿಪಂತೆ ನಿನ್ನ ನುಡಿಯ ಢಕ್ಕೆಯಂ,

ನಮ್ಮೆದೆಯಂ ತಾಯೆ ಬಲಿಸು,
ಎಲ್ಲರ ಬಾಯಲ್ಲಿ ನೆಲಸು,
ನಮ್ಮ ಮನಮನೊಂದೆ ಕಲಸು !
ಇದನೊಂದನೆ ಕೋರುವೆ-
ನಿನ್ನ ಮೂರ್ತಿ ಜಗತ್ಕೀರ್ತಿ ಎಂದಿಗೆಮಗೆ ತೋರುವೆ ?

ಮಂ. ಗೋವಿಂದಪೈ

## ೧೧. ತುಳುನಾಡ ರಾಣಿ

ಕೊಡಲಿ ರಾಮನ ಸಿಡಿಲಿಗಳುಕಿ ಹಿಂದೋಡಿ
ಕಡಲಾರೆ,-ನೀನಲೆಗಳನ್ನೊಡೆದು ಮೂಡಿ,-
ಪಡೆದ ಶಾಸನದಾದೆ ತುಳುನಾಡ ರಾಣಿ !
ಬೆಡಗಿಂದ ಧರೆಗಾದೆ ಕೊರಳ ಕಟ್ಟಾಣಿ !

ಗಟ್ಟಿಗಳ ಮೆಟ್ಟಲಿನ ಅಟ್ಟಳಿಗೆ ಏರಿ,
ಸಾಟಿ ಇರದೊಡ್ಡೋಲಗದ ಸೊಬಗು ಮೀರಿ,
ಅಟ್ಟಹಾಸದ ಕಡಲು ಕಾಲ್ ತೊಳೆಯುತಿರಲು,
ಒಟ್ಟರಿಸಿದಾ ಪುಣ್ಯರಜ ಎನಿಸೆ ಮಳಲು-

ಮಳೆ ಮುಗಿಲ ವೇಣಿಯಲಿ, ಮಳೆಬಿಲ್ಲ ಹಾರಂ,
ತಿಳಿಯ ಬೆಳದಿಂಗಳಿನ ಕವಚ ಸಿಂಗಾರಂ,
ಹೊಲದ ಹಸುರುಡಿಗೆ, ನೇತ್ರಾವತಿಯ ಮಾಲೆ-
ಮಲೆಗಾಳಿ ಸಾರುತಿಹುದಿಂತು ತವಲೀಲೆ.

ದುಡುಕಿದಾ ಸೂರೆಗರ ಹಾವಳಿಗೆ ನೊಂದೆ !
ಕಡಲಣುಗೆ ! ಬಡವಾದೆ ಕಾವರಿಲ್ಲ
ಪಡುಗಡಲ ದಾಟಿ ಸೋದರಿಯೊದಗೆ ಮುನ್ನಾ
ಕೆಡುಗಾಲ ಅಡಗಿ ಬೀಸಿತು ಶಾಂತಿ ಪವನ.

ತಲೆದೂಗೆ ತೆಂಗು, ನೇಗಿಲು ನಗಲು ಹೊಳೆಯು
ಸುಳಿದೋಡೆ, ತಲೆ ಎತ್ತಿ ಕಂಗೊಳಿಸೆ ಬೆಳೆಯು,
ಮಳಿಗೆ ತಕ್ಕಡಿ ಕುಣಿಯೆ, ಶಂಖ ಡೇಗುಲದಿ
ಮೊಳಗೆ, ಮನೆ ಮಕ್ಕಳಿಂದುಲಿಯೆ ಗದ್ದಲದಿ-

ಮೆರೆಯಲಿಂತಾಂಗ್ಲೇಯರೊಡೆತನದಿ ನಾಡು !
ಪರಮೇಶನೊಲುಮೆಯಿಂ ; ಶಾಂತಿಗಿದು ಬೀಡು !
ಬರಲೆಮಗೆ ಜನ್ಮ ನಿನ್ನುದರದಲಿ, ತಾಯೆ
ದೊರೆಯಲೆಮಗನುದಿನವು ನಿನ್ನಡಿಯ ಸೇವೆ

ಎಂ. ಎಸ್. ಕಾಮತ್

## ೧೨. ಕನ್ನಡ ನಾಡ ರಾಣಿ

ಏಳು ಶೂರರ ಖಣೀ ಏಳು ಶೂರರ ರಾಣಿ
ಏಳು ತೀರದ ವೀರರಸದ ವಾಣಿ
ಏಳು ಮೀರಿದ ಜಾನಿ ಏಳು ಈ ಸ್ಥಿತಿಗಾಣಿ
ಏಳು ವರ ವರದ ಪಾಣಿ.

ಶೂರ ಪುರುಷರ ಕೊನೆಯು ವೀರ ಕವಿಗಳ ಗೊನೆಯು
ಭೀರುತನವೆಂಬ ಶಲ್ಯಕ್ಕೆ ಮೊನೆಯು
ಧೀರ ಸತಿಯರ ತೆನೆಯು ವೀರರಸಗಳ ಸೊನೆಯು
ಈ ರೀತಿ ನಿನ್ನ ಮನೆಯು.

ಭರದೆ ಬೆಳೆಯುವ ಬೆಳೆಯು ತ್ವರದೆ ಹರಿಯುವ ಹೊಳೆಯು
ಇರದೆ ಪ್ರತಿಕಾಲಕ್ಕೆ ಬರುವ ಮಳೆಯು
ವರಲಕ್ಷಣದ ಕಳೆಯು ಸುರರ ಸೀಮೆಯ ಬೆಳೆಯು
ಇರುವಂಥ ನಿನ್ನ ಇಳೆಯು.

ಸತ್ತಿರುವುದೆದೆಸೇರು ಸುತ್ತಿರುವ ವಿಷ್ಣುಹೀರು
ಬತ್ತಿರುವುದಮೃತ ಝುರಿ ಮತ್ತೆ ತೋರು
ಸತ್ತುಳ್ಳ ನೂರಾರು ಬಿತ್ತುಗಳ ನೀರೂರು
ಕಿತ್ತು ಭಯಬಿಟ್ಟ ಬೇರು.

ಅಂದಿನಂತಹ ಧನವು ಅಂದಿನಂತಹ ತನುವು
ಅಂದಿನಂತವರ ಹಿರಿದಾದ ಮನವು
ಅಂದೆ ಅಂದಿನತನವು ಚಂದದಾಟಕೆ ಎಂದು ತಂದಿತು ದಿನವು !

ನೀನು ನೆಲೆಸಿದ ಕಾಡು ಮಾನಿಸುವರೌ ನಾಡು
ಧ್ಯಾನಿಸುವರ್ಗೈ ನಿನ್ನ ಹಾಡಿ ಹಾಡು
ಈ ನಾಡಿನೊಳು ಮಾಡು ಪ್ರಾಣಪುತ್ರರ ಬೀಡು
ಏನು ನಂದನದ ಪಾಡು !

**ಅಂಬಿಕಾತನಯದತ್ತ**
(ದ. ರಾ. ಬೇಂದ್ರೆ)

## ೧೩. ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು

(ರಾಗ: ಮೋಹನ; ತಾಳ: ಝಂಪ)

ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು
ಬದುಕು ಬಲುಹಿನ ನಿಧಿಯು ಸದಭಿಮಾನದ ಗೂಡು || ಪ ||

ರಾಜನ್ಯರಿಪು ಪರಶುರಾಮನಮ್ಮನ ನಾಡು
ಆ ಜಲಧಿಯನೆ ಜಿಗಿದ ಹನುಮನುದಿಸಿದ ನಾಡು
ಓಜೆಯಿಂ ಮೆರೆದರಸುಗಳ ಸಾಹಸದ ಸೂಡು
ತೇಜವನು ನಮಗೀವ ವೀರವೃಂದದ ಬೀಡು

ಲೆಕ್ಕಿಗಮಿತಾಕ್ಷರರು ಬೆಳೆದು ಮೆರೆದಿಹ ನಾಡು
ಜಕ್ಕಣನ ಶಿಲ್ಪಕಲೆಯಚ್ಚರಿಯ ಕರುಗೋಡು
ಚೊಕ್ಕ ಮತಗಳ ಸಾರಿದವರಿಗಿದು ನೆಲೆವೀಡು
ಬೊಕ್ಕಸದ ಕಣಜವೈ ವಿದ್ವತ್ತೆಗಳ ಕಾಡು *

ಪಾವನೆಯರಾ ಕೃಷ್ಣೆ ಭೀಮೆಯರ ತಾಯ್ನಾಡು
ಕಾವೇರಿ ಗೋದೆಯರು ಮೈದೊಳೆವ ನಲುನಾಡು
ಆವಗಂ ಸ್ಫೂರ್ತಿಸುವ ಕಬ್ಬಿಗರ ನಡೆಮಾಡು
ಕಾವ ಗದುಗಿನ ವೀರನಾರಾಯಣನ ಬೀಡು

**ಹುಯಿಲಗೋಳ ನಾರಾಯಣರಾಯರು**

---

* ವಿದ್ಯಾರಣ್ಯ

## ೧೪. ಅರುಣೋದಯ

ಕನ್ನಡ ನಾಡಿನ ಮುಂಬಾನೊಳು ಚೆಂ
ಬಣ್ಣದ ಬೆಳಕು ಇದೇತರದು ?
ಹೊನ್ನಗದಿರ ಬರಲಿಹನೆಂದೊರೆಯಲು
ಮುನ್ನವೆ ಬಂದರುಣನದೆ ಇದು ?
ನನ್ನಿಯು ! ಅರುಣನದೆ ಇದು !

ಭಲೆ ಭಲೆ ! ನಮ್ಮಯ ಬಳಿಯಿಹ ಬಾನೊಳೆ
ತೊಳಗನೇಸರು ಮೂಡುವನು,
ಹೊಳೆಯುವ ಕೈಗಳನೆಳೆದೆಲ್ಲೆಡೆಯುಲಿ
ಬೆಳಕು ಬೆಳಕನೆ ಮಾಡುವನು ;
ಹೊಳಪನು ಎಲ್ಲಕೆ ನೀಡುವನು.

ಬೆಳಕನು ಮಾಡಲು ಕಳೆದುಹೋಗದೆಯೆ
ಉಳಿವುದೇ ಕೊಳೆಗತ್ತಲೆಯು ?
ಮಲಗಿದ ಕನ್ನಡದೆಳೆಯರು ಏಳುತೆ
ಸುಳಿದಾಡುವ ! ಎತ್ತೆತ್ತಲೆಯು ;
ನಲಿದಾಡುವ ! ಎತ್ತೆತ್ತಲೆಯು.

ಮಿರುಗುವ ಕಿರಣವ ಹರಡುತೆ ನೇಸರು
ನಡುಬಾನಿಗೆ ತಾನೇರುವನು,
ಬಿರಿಮುಗುಳೆಲ್ಲವನರಳಿಸಿ ಹುರುಳನು
ಹವೆಯೊಳಗೆಲ್ಲಿಯು ತೂರುವನು,
ಅವನಿಗೆ ಕಂಪನು ಬೀರುವನು.

ಕನ್ನಡ ನಾಡಿನ ಗುಡಿಗಳಸಕೆ ಹೊಸ-
ಬಣ್ಣವನೀತನು ಹಾಕುವನು,
ಹೊನ್ನಿನ ಕಿರಣದ ಹಂದರ ಬಿಗಿಯುತೆ
ಕನ್ನಡಿಗರನಲ್ಲಿರಿಸುವನು,
ಎಲ್ಲರ ಎದೆಗಳ ಬೆರಸುವನು.

ಭಯವೇತರದಾವಾಗ ನಮಗೆ? ನಿ-
ರ್ಭಯರು! ನೆರೆದು ಕುಣಿಕುಣಿದಾಡಿ,
'ಜಯ ಜಯ ಜಯ ಕರ್ಣಾಟಕ' ಎನ್ನುತೆ
ಹಾಡುವ ನಾವೆಲ್ಲರು ಕೂಡಿ.
ಕೂಗುವ ನಾವೆಲ್ಲರು ಕೂಡಿ.

ಕನಸಿನೊಳಗೆ ಕಣ್ಮುಚ್ಚಿಯೆ ನೋಡಿದ
ಇನಿನೋಟದ ಪಟಗಳ ಬರೆದು,
ನನಸಿನಲಿಯು ಕಾಣುವ ತೆರೆಮಾಡುತೆ
ಜನಕಚ್ಚರಿ ತೋರುವ! ನೆರೆದು
ಬೆರಗನುಗೊಳಿಸುವ ನಾವ್ ಬೆರೆದು.

ಕೇಳಿರಿ ಕೇಳಿರಿ ಕೋಳಿಯ ಕೂಗನು
ಕೇಳಿಸುವುದೇ ಬೆಳಗಿನ ಕಾಳಿ?
'ಏಳ್ಳೈ ಕನ್ನಡ ಭಾಗ್ಯವಿಧಾತನೆ?'
ಎನುತೆ ಹಾಡುತಿಹ ವೈತಾಳಿ!
ಸುಳಿಯುತಿಹುದು ನಸುಕಿನ ಗಾಳಿ;
ಅಲಸಿಕೆಯುಳಿದೆಲ್ಲರು ಏಳಿ!

**ಆನಂದಕಂದ**
(ಕೃಷ್ಣಶರ್ಮ ಬೆಟಗೇರಿ)

## ೧೫. ನಾಡಿನ ಹಾಡು

ತಾರೆಗಳು ಮೇಳವಿಸಿ ಬಂದುಬಿಟ್ಟಿಹ ಬೀಡು ನಮ್ಮ ಕನ್ನಡದ ನಾಡು
ತಾರೆಗಳ ಒಡಹುಟ್ಟು, ತಾರೆಗಳ ಒಡನಾಡಿ, ನಮ್ಮ ಕನ್ನಡದ ಹಾಡು.
ಭೂಪತಿಯು ಕವಿಯಾಗಿ ಕವಿ ಚಮೂಪತಿಯಾಗಿ ಮೆರೆದಿರುವ ನಮ್ಮ ನಾಡು,
ಪತಿಯಿಲ್ಲದವಳಂತೆ ಗತಿಯಿಲ್ಲದಾಗಿಹುದು, ಹೀನವಾಗಿಹುದು ನೋಡು!
ಧವಲಗಿರಿ ಗಂಗೆಯನು ಆಮಂತ್ರಿಸಲು ನಡೆದ ನಮ್ಮ ಕನ್ನಡದ ತಾಯಿ
ಕಳೆದುಕೊಂಡಿಹಳಿಂದು ಕೃಷ್ಣೆಗಿಹ ಸೌಹಾರ್ದವನ್ನು ಸಹ, ಇಲ್ಲ ಬಾಯಿ!

ಸಾಮ್ರಾಜ್ಯಗಳನಾಳಿ ಮೆಯ್ಯುಂಡ ಕನ್ನಡರು ಹೆಸರಾದ ಸಾಹಸಿಗರು–
ಕೊಳೆಯುತಿಹರಲ್ಲೇನೋ! ಅಲ್ಲಲ್ಲಿ ಈಗಾಗಿ ಹೊರಮನೆಯ ಬಾಣಸಿಗರು!
ಸುಲಿದ ಹಣ್ಣಂತೆ ಮಧುಮಧುರವಾಗಿಹ ನುಡಿಯು ಸುಲಿದ ಹೆಣ್ಣಿಹುದು ನೋಡು
ಸಲಿಗೆಯನು ಬೆಳೆಸುತ್ತ ಸುಲಿಗೆಯನು ಮಾಡಿದರು ಕನ್ನಡಕೆ ಬಂತು ಕೇಡು!
ಗ್ರೀಷ್ಮಕಿಹ ಮುಂಬೆಳಗು ಸಹ ತೋರುತಿಹುದೀಗ ಮುಂಗಾರ ಸಂಜೆಯಂತೆ.
ಭೀಷ್ಮರಂತಹ ಸುತರ ತಾಯಿ ಚಿಂತೆಯಲಿಹಳು ವಿಧವೆಯಿಹ ಬಂಜೆಯಂತೆ.
ಚಿಂತೆಯಾ ಬೆಂತರವು ಬೇಡವ್ವ ನಲ್ದಾಯಿ! ಈ ನಿನ್ನ ಅಧರದಲ್ಲಿ,
ಮುತ್ತೊಂದು ಕಾಣುವುದು ದೇವನಿತ್ತಿಹುದಿಂದು ಮತ್ತೆ ನಿನ್ನುದರದಲ್ಲಿ,
ಬೆಳಗುವುಧು ಹೊಸ ಹುಟ್ಟು, ಬರಲಿಹನು ಸುಕುಮಾರ, ಬರಲಿಹನು ಪರಮಪುರುಷ;
ಪುಲಕೇಶಿ-ಮಾಧವರ ಬರವಿನಂತಾದೀತು ಮತ್ತಿನ್ನು ನಿನ್ನ ಹರುಷ!
ಅವನೊಂದು ಹೆಜ್ಜೆಯದು ಬಿಜ್ಜೆ, ಪದಸಂಪದವು, ಇನ್ನೊಂದು ಮುಕ್ತಿಪದವು
ಒಂದಡಿಯು ಬಿಡುಗಡೆಯು, ಇನ್ನೊಂದು ಹತ್ತುಗಡೆ–ಇಂತಿಹುದು ಅವನ ಒದವು!
"ಕಣ್ಗೆ ಕಾಮನ ರಕ್ಷೆ, ಬೆನ್ಗೆ ಭೀಮನ ರಕ್ಷೆ, ಮುಂಗೈ ಮುರಾರಿ ರಕ್ಷೆ"
ಎಂದು ಸಂತಸವುಕ್ಕಿ ಒರೆಯುತಿದೆ ಹಾಲಕ್ಕಿ, ಹೇಳುವೆನು ನಿನ್ನ ಸಾಕ್ಷಿ!
ನಿನ್ನ ಬೇಸರ ಬೇನೆ ಬಲು ಹಿರಿದು ನಲ್ದಾಯಿ! ಪಡೆದ ಫಲವದಕು ಹಿರಿದು.
ಬಾಳೋಣ ಏಳಿನ್ನು! ಅರಸಾಗಿ ಆಳೋಣ! ಮನೆಮುರುಕರನ್ನು ಮುರಿದು!
ನಿನ್ನ ನಗೆಯೇ ಬೆಳ್ಳಿ, ನಿನ್ನ ಮೊಗ ಚಂದ್ರಮನು, ನಿನ್ನ ಮಗ ಸೂರ್ಯನಿರಲಿ!
ನಿನ್ನವರನುದ್ಧರಿಸಿ ಮನುವಂಶವನು ಹರಸಿ ಬೆಳಗುತಿಹ ಆರ್ಯನಿರಲಿ!

ವಿನಾಯಕ
(ವಿ. ಕೃ. ಗೋಕಾಕ್)

## ೧೬. ಕಾರ್ಗಾಲದ ವೈಭವ

ಪಡುವಣ ತೀರದ
ಕನ್ನಡ ನಾಡಿನ
ಕಾರ್ಗಾಲದ ವೈಭವವೇನು?
ಚೆಲ್ಲಿದರೆನಿತೂ
ತೀರದ ನೀರಿನ
ಜಡದೇಹದ ಕರ್ಮುಗಿಲೇನು?

ಕೆರೆಗಳನುಕ್ಕಿಸಿ
ತೊರೆಗಳ ಸೊಕ್ಕಿಸಿ
ಗುಡ್ಡವ ಬೆಟ್ಟವ ಕೊರೆ ಕೊರೆದು

ಕಡಲಿನ ತೆರೆಗಳ
ರಿಂಗಣಗುಣಿಯಿಸಿ
ಮೊರೆ ಮೊರೆವುದದೋ ಸರಿ ಸುರಿದು

ಕುದುರೆಮೊಗದ ಕಡಿ
ವಾಣದ ತೆರದಲಿ
ಮಿಂಚುಗಳವು ಥಳಥಳಿಸುವುವು,
ಗೊರಸಿನ ಘಟ್ಟನೆ
ಯಂತಿರೆ ಥಟ್ಟನೆ
ಗುಡುಗುಗಳವು ಗುಡುಗಾಡಿಪುವು.

ಆವೇಶದ ವೇ
ಷದ ಬಿರುಸುಟ್ಟುರೆ
ಊರೂರಲಿ ಹಾರೋಡುವುದು
ಮರಗಳ ಕೀಳುತ
ಬಂಡೆಯ ಹೋಳುತ
ಜಗಜಟ್ಟಿಯ ತೆರನಾಡುವುದು.

ಹಗಲಿರುಳೆನ್ನದೆ
ಹೊಡೆಯುವ ಜಡಿಮಳೆ
ಬಡಿಕೋಲ್ಮಿಂಚಿನ ಲಾಗುಗಳು.
ಮನೆಗಳ ಮನಗಳ
ಒಳಗೂ ಹೊರಗೂ
ಜಿನುಗುತಿರುವ ಹನಿಸೋನೆಗಳು.

ಮುಗಿಲಿನ ಹುಬ್ಬಿನ
ಗಂಟಿಕ್ಕುತ ಬಿರು
ದನಿಯಲಿ ಬೆದರಿಸುತಿಹನಲ್ಲ.
ನಲ್ಲನೆನುತೆ ಆ
ಗಸವೆಣ್ಣಾಗುತೆ
ಸುರಿಸಿದ ಕಣ್ಣೀರ್ಪೊನಲೆಲ್ಲ.

ಕ. ಶಂಕರಭಟ್ಟ

# ೧೭. ಹೈದರಾಬಾದ್

ಸರಸರನೆ ಪರಿಪರಿದು ನೆರೆಯೆದ್ದು ತೆರೆಬಿದ್ದು ಸುಳಿ ಸುಳಿಯುತಿದೆ ಮೂಸಿ ಹೊನಲು
ಇಕ್ಕೆಲದೆ ಪವಡಿಸಿದೆ ಕಣ್ಣೆಲೆಗೆ ಸಿಲ್ಕದೆಯೆ ಬಿತ್ತರದಿ ಹೈದರಾಬಾದು.
ಇಂತೆಂದು ತನ್ನೆರೆಯನೊಂದೆದೆಯ ವೈಶಾಲ್ಯವೆಂಬುದನು ಉಗ್ಗಡಿಪ ತೆರದಿ
ಬಾನ್ಪುದಿಯ ಮುದ್ದಿಡುವ ಸೌಧಾಳಿ ಸಾರುತಿದೆ ದೊರೆಯೈಸಿರಿಯ ಪರಿಪರಿಯಲಿ
ರಾಜ್ಯದಧಿದೇವತೆಯ ಕರುಮಾಡದಂದದಲಿ ಬಿಮ್ಮನಿದೆ ಚಾರುಮೀನಾರು
ನಾಡ ಸಿರಿವೆಣ್ಣಿಲ್ಲಿ ಹಗಲಿರುಳು ಎಳನಗೆಯುರಳು ಸೂಸಿ ನಲಿನಲಿಯುತಿಹಳು
ಆಗಸದಿ ನೇಸರನು ಬಳಸಿರುವ ಗರಗಳನೆ ಹೊಳಲ ಸುತ್ತಲಿವೆ ತುಂಬುಕೆರೆ
ಬೀದಿಯಿತ್ತಂಡದಲಿ ಸಾಲ್ಗೊಂಡ ವೃಕ್ಷಗಳು ತಣ್ಣೆಳಲುಗಳನೆರಚುತಲಿವೆ
ತಾರೆಗಳಂದವಲಿ ಬೆಳಕುಗಳು ಇರುಳಿನೊಳು ಬಾಂದಳವ ನೆರೆವೆಗ್ಗಳಿಸಿವೆ
ಸಿಂಗರದ ಸದನಂಗಳೋರಣದಿ ಚೆಂದಳಿರ ಚಮನುಗಳ ಮಾಲೆಯಲಿ ಭರದಿ
ಹರಿದಾಡುತಿಹ ವಾಹನಗಳೋಟದಲಿ ನೋಟದಲಿ ರಂಜಿಸಿದೆ ರಾಜಧಾನಿ

ಹೊಳಲೊಡತಿಯೊಡಲೊಳಡಗಿರುವುದೇಂ ?
ಆಡಳತೆ ಕೊರತೆಗೆಡೆಯಾಗದಂದದಿ ನಡೆಪ ಮಂತ್ರಿಮಂಡಲವು
ಪ್ರಭುವಿನಾಣತಿಗೆ ತಲೆವಾಗುತಲಿ ಪ್ರಜೆಗಳೊಲುಮೆಯನಾಂತಿರುವುದು
ಮನ್ನೆಯರ ಹೆಕ್ಕಳಿಕೆ ವಂಶದೌನ್ನತ್ಯದಗ್ಗಳಿಕೆ ಬೀರುತಿದೆ
ರಾಜನಿಷ್ಠೆಯಲಿ ಭಕ್ತಿಯಲಿ ವಿನಯದಲಿ ಸರಿದೊರೆಯಿಲ್ಲಿವರಿಗೆ
ಸಾಮಂತರೋಳಿಯಲಿ ಕವಿ ಗಮಕಿ ವಾಗ್ಮಿಗಳ ಗಡಣದಲಿ ನೆರೆದು
ಸೊಡರುಗಳ ಸಡಗರದಿ ಗುಡಿಗಳಿಟ್ಟಣದಿ ಮೆರೆಯುತಿದೆಯೋಲಗವು
ಒಮ್ಮನದಿ ಕಲೆತಿಹರು ವಿಧ ವಿಧದ ಭಾಷೆಗಳನಾಡುತಿಹ ಜನರು
ಕನ್ನಡ ತೆನುಗು ಮರಾಠಿ ನುಡಿಗಳು ಬೆಳೆದಿಲ್ಲಿ ಬಲಗೊಂಡಿರುವುವು
ಬೆಂಗಾಡ ಮಂಗಳವ ಮಸಗಿದುಸ್ಮಾನಿಯಾ ವಿದ್ಯಾನಿಲಯವು
ವಾಣಿಗಾಡುಂಬೊಲವು ಭಾರತದಿ ತಾಯ್ನುಡಿಗಿದುವೆ ಮೊದಲ ತವರು

ಚಿತ್ರದ ಬೆಸನದು
ಹೈದರಬಾದು
ಹೊನ್ನಿನ ಹೊಳಪದು
ಹೈದರಬಾದು
ಕಂಗಳ ಬೆಳಕದು
ಹೈದರಾಬಾದು

ಮಂಗಳ ರೂಪದು
ಹೈದರಬಾದು
ಉಸ್ಮಾನಲಿಯದು
ಹೈದರಬಾದು
ಎಂತೆನಿತು ಎಮ್ಮ ಪ್ರಭುವಿನ ಭಾಗ್ಯವು !

ಡಿ. ಕೆ. ಭೀಮಸೇನರಾವ್

## ೧೮. ಕೊಡಗು

ಕೊಡಗು ಬೆಡಗಿನ ಬೀಡು ! ಸೌಂದರ್ಯದಮೃತಮಂ
ಕುಡಿಯಿಮೆಲೆ ಕಣ್ಗಳಿರ ! ಇದೊ ಮಂಜು ಬಿತ್ತರಿಸಿ
ಕಡಲವೋಲ್ ತೋರ್ದಪುದು ಮೇಲೆಳ್ದ ಗಿರಿಸಾನುಗಳ್ ದ್ವೀಪನಿವಹಮಾಗೆ
ಅಡಿಯಿಂದೆ ಮುಡಿವರಂ ಬೆಟ್ಟುಗಳ್ ನೀಳ್ದಿಸೆವ
ಗಿಡಗಳಿಂ ಪಸುರೇರಿ ಸೌಂದರ್ಯದಧಿದೇವಿ
ಯೆಡೆಯಾಡುವೊಳ್ಪುವೆತ್ತೆಡೆಗಳಾಗಿತ್ತಲಿದೊ ಸೊಗಯಿಪುವು ಸೊಂಪುವೆತ್ತು

ಬಿಸಿಲೆಲೆಗಳೊಳಗಿರದೆ ಸೋಸಿ ಬರ್ಪುದು ಮತ್ತೆ
ಪಸುರಮೇಲ್ ನೀರಮೇಲಲೆವೆಲರ್ ಸುಳಿದಪುದು
ಬಿಸುಪಳಿಯದಿರ್ದಪುದೆ ? ಕೊಡಗು ತಣ್ಣೆಳಲ ತವರೂರಲೇ ತಣ್ಪಿನಿಂಬು
ಪೊಸತೆರದ ಬಗೆವಗೆಯ ವಿಹಗಂಗಳೆತ್ತಲುಂ
ಮಿಸುಪ ಮೆಯ್‌ಬಣ್ಣದಿಂ ಮನವೊಲಿಪ ಮಾಟದಿಂ
ದೆಸೆದು ನುಣ್ಪನಿಗುಡತೆ ನಲಿದಪುವು ಮನಮಿಲ್ಲಿ ನಲ್ವಗೆಗಳೆಡೆಯಾದುದು

ಪರಿವ ಕಾಳ್ಪುರದ ಮೆಲ್ಲುಲಿಯಿಂದೆ ಬಗೆಗೊಳಿಪ
ದರಿಯಿತ್ತಲುತ್ತುಂಗಶಿಖರಂಗಳಿಂದೆಸೆವ
ಗಿರಿಯತ್ತಲೇಂ ಪೆಂಪೊ ! ತಂಬೆಲರ ಸೊಗಯಿಸುವ ಸೋಂಕಿನಿಂ ಸೊಗಮಿದೆನಿತೋ
ಬಿರಿವೂಗಳನಿಗಂಪಿಗೆನಿತೊಂದು ತುಂಬಿಗಳೊ
ಸುರಯುವತಿಯರ್ ನಲ್ಲರೊಡನಿಲ್ಲಿ ಸಾರ್ತಂದು
ಸರಸವಾಡಲ್ಕುಚಿತಮಾದ ನೆಲಮಿದು ಕೊಡಗು ಕರುನಾಡ ಮುದ್ದುಗೂಸು

ಚೆಲುವಿನೀ ಕಡಲೊಳಗೆ ಸಾಲ್ಪಿಡಿದು ಸೊಂಪೆಸೆವ
ಮಲೆಗಳಿವು ಸವಿಕಂಪ ತರುರಾಜಿಗಳಿನದೇ
ನಲೆವಲೆವ ತೆರೆಗಳಂತೆಸೆದಪುವೊ! ನವವೃಷ್ಟಿಯಿಂ ಸೃಷ್ಟಿಗೇಂ ಕಾಂತಿಯೋ
ನೆಲಮಾಗಸಂ ದಿಕ್ಕುಗಳ್ ರಾಮಣೀಯಕದ
ನಿಲಯಂಗಳಿವನೆನಿತು ನೋಡಿದೊಡಮಕ್ಷಿಗಳ್
ತೊಲಗಲೊಲ್ಲವು ಮನಂ ತಣಿಯದೋಲಾಡಿಯೀಸೌಂದರ್ಯಜಳಧಿಯಲ್ಲಿ

ಬಂದೆ ನಾನಿಲ್ಲಿಗೆನ್ನಕ್ಕರದ ತಾಯ್ನೆಲದ
ಚೆಂದಮಂ ನೋಡುತುಂ ಶ್ರೀನಿವಾಸನ ನಲ್ಮೆ
ಯಿಂದೆ ಸುಖದಿಂದೆ ಸಂಚರಿಸುತುಂ ಬಹುಕಾಲದಿಚ್ಛೆ ಕೈಗೂಡಿತಿಂದು
ಎಂದು ಕಣ್ತುಂಬೆ ಕರುನಾಡ ಚೆಲುವಂ ಕಾಣ್ಬೆ
ನೆಂದು ಮನದೊಳಗನಿಶಮಾಗೆ ಚಿಂತಿಸುತಿರ್ದೆ
ನೆಂದು ತಿಳಿದಿರ್ದರಾರಿಂತು ಸೊಬಗಿನ ಸುಗ್ಗಿಯಿದಿರೊಳಾಂ ನಿಲ್ವೆನೆಂದು

ಎನ್ನ ನಾಡಂದಮಿಂತೆಂದು ಭಾವಿಸಿದೆನಿ
ಲ್ಲಿನ್ನೆಗಂ! ಭಾವನೆಗೆ ಚೆಂದಮಿದು ನಿಲುಕುವುದೆ?
ನಿನ್ನ ಸೌಂದರ್ಯಮಿದು ನಿನ್ನ ಪೆರ್ಮೆಯ ಕುರುಪು! ಕರುನಾಡೆ, ಪುಣ್ಯಭೂಮಿ!
ಇನ್ನರಿವುದರಿದಲ್ತು ನಿರ್ಮಳಾಂತಃಕರಣ
ರುನ್ನತಗುಣೋದಯರ್ ಮಂಗಳನಿಕೇತನರ್
ನಿನ್ನೊಡಲೊಳೆಂತುದಯಿಸಿದರೆಂದು! ಕರುನಾಡು ದೇವರಳ್ಕರಿನ ನಾಡು

ದರಿಗಳಿರ, ಗಿರಿಗಳಿರ, ಝರಿಗಳಿರ, ಮೃಗಪಕ್ಷಿ
ತರುಗಳಿರ, ಪೂಗಳಿರ, ತಂಬೆಲರ, ಬೆಳ್ಮಂಜೆ,
ನರುಗಂಪೆ, ಇಂಚರವೆ, ಬೀಳ್ಕೊಳ್ವೆನೈ! ನಮೋ! ನಿಮ್ಮ ಸೌಹಾರ್ದಮೆನಿತೊ
ಇರಿಸಿದಿರ್ ಸೌಂದರ್ಯಸಾರಸರ್ವಸ್ವಮಂ
ತೆರೆದೆನ್ನ ಮುಂದೆ ನೀಮ್! ಪೊರಗಣ್ಗೆ ನೀಮಿನ್ನು
ಮರೆಯಾದೊಡಂ ಹೃದಯಭಿತ್ತಿಯೊಳ್ ಚಿತ್ರಿತರ್! ನಿಮ್ಮನಾಂ ಮರೆವುದೆಂತು?

ಸಾಲಿ ರಾಮಚಂದ್ರರಾಯ

# ೧೯. ಮಡಿಕೇರೀಲಿ ಮಂಜು

ಬೂಮಿನ್ ತಬ್ಬಿದ್ ಮೋಡ್ ಇದ್ದಂಗೆ
ಬೆಳ್ಳಿ ಬಳಿದಿದ್ ರೋಡ್ ಇದ್ದಂಗೆ
ಸಾಫಾಗ್ ಅಳ್ಳ ತಿಟ್ಟೆಲ್ಲಂಗೆ
   ಮಡಿಕೇರೀಲಿ ಮಂಜು !

ಮಡಿಗಿದ್ ಅಲ್ಲೀ ಮಡಗಿದ್ದಂಗೆ
ಲಂಗರ್ ಬಿದ್ದಿದ್ದ್ ಅಡಗಿದ್ದಂಗೆ
ಸೀತಕ್ ಸಕ್ತಿ ಉಡಗೋದಂಗೆ
   ಅಳ್ಳಾಡಾಲ್ದು ಮಂಜು !

ತಾಯಿ ಮಗೀನ್ ಎತ್ಕೊಂಡಂಗೆ
ಒಂದಕ್ಕೊಂದು ಆತ್ಕೊಂಡಂಗೆ
ಮಡಿಕೇರೀನ ಎದೆಗೊತ್ಕೊಂಡಿ
   ಜೂಗೀಡ್ತಿತ್ತು ಮಂಜು !

ಮಲಗಾಕ್ ಸೊಳ್ಳೀಪರದೆ ಕಟ್ಟಿ
ಒದಿಯಾಕ್ ಒಗದಿದ್ ದುಪಟಿ ಕೊಟ್ಟಿ
ಪಕ್ದಾಗ್ ಗಂದದ್ ದೂಪ ಆಕ್ದಂಗ್
   ಮಡಿಕೇರೀಮೇಲ್ ಮಂಜು !

ಮಂಜಿನ ಮುಸಕಿನ್ ಕಾವಲ್ನಲ್ಲಿ
ಒಣಗಿದ್ ಉದ್ಯಾನೆ ಉಲ್ನಲ್ಲಿ
ಒಳಗೇ ಏನೋ ಸರದೋದಂಗೆ
   ಅಲುಗಾಡ್ತಿತ್ತು ಮಂಜು

ನಡಿಯೋ ದೊಡ್ದೊಡ್ ದೇವಲ್ನಂಗೆ
ಪಟ್ಣದ ಸುತ್ತಿನ್ ಕಾವಲ್ನಂಗೆ
ಅಲ್ಲಲ್ಲೇನೆ ಆಂಗಂಗೇನೆ
   ಗಸ್ತಾಕ್ತಿತ್ತು ಮಂಜು !

ಸೂರ್ಯನ್ ಕರೆಯೋಕ್ ಬಂದ್ ನಿಂತೋರು
ಕೊಡಗೀನ್ ಎಲ್ಲಾ ಪೂವಮ್ನೋರು
ತೆಳ್ನೆ ಬೆಳ್ನೆ ಬಟ್ಟೇನಾಕಿ
   ಬಂದಂಗಿತ್ತು ಮಂಜು.

ಚೆಮ್ಮಾನಿದ್ರ್ ಎಳಬಿಸಿಲಿನ್ ಕೆಂಪು
ಮಂಜಿನ್ ಬಣ್ಣ ಕಣ್ಗೆ ತಂಪು
ಕೊಡಗಿನ್ ಲಸ್ಮೀರ್ ಪೂವಮ್ನೋರ್ಗೆ
ಆಲೀನ್ ಸೌಂದ್ರೀ ಮಂಜು !

ಅಗಲೇ ಬರಲಿ ರಾತ್ರೇ ಬರಲಿ
ಬಿಸಿಲು ನೆರಳು ಏನೇ ಇರಲಿ
ಕಣ್ಮರೆಯಾಗಾಕ್ ತಾವ್ ಕೊಡಾಲ್ದು
ಮಡಕೇರೀಗೆ ಮಂಜು !

ತೈಲ ನೀರಿನ್ ಮೋಗಿದ್ದಂಗೆ
ಪೂವಮ್ಮ-ನನ್ ತಂಗೀದ್ದಂಗೆ
ಬಿಟ್ಟೂ ಬಿಡದಂಗೆ ಇಡಕೊಂತಿತ್ತು
ಮಡಕೇರಿಗೆ ಮಂಜು !

ರತ್ನ
(ಜಿ. ಪಿ. ರಾಜರತ್ನಂ)

## ೨೦. ಹುತ್ತರಿ ಹಾಡು

ಎಲ್ಲಿ ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೋ ?
ಎಲ್ಲಿ ಮೋಹನ ಗಿರಿಯ ಬೆರಗಿನ ರೂಪಿನಿಂದಲಿ ನಿಂದಳೋ ?
ಎಲ್ಲಿ ಮುಗಿಲಲಿ ಮಿಂಚಿನೋಲ್ ಕಾವೇರಿ ಹೊಳೆ ಹೊಳೆ ಹೊಳೆವಳೋ ?
ಎಲ್ಲಿ ನೆಲವನು ತಣಿಸಿ ಜನಮನ ಹೊಲದ ಕಳೆಕಳೆ ಕಳೆವಳೋ ?

ಅಲ್ಲೆ ಆ ಕಡೆ ನೋಡಲಾ !
ಅಲ್ಲೆ ಕೊಡಗರ ನಾಡಲಾ
ಅಲ್ಲೆ ಕೊಡವರ ಬೀಡಲಾ !

ಸವಿದು ಮೆದ್ದರೊ ಯಾರು ಪೂರ್ವದಿ ಹುಲಿಯು ಹಾಲಿನ ಮೋವನು ?
ಕವಣೆ ತಿರಿಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು ?
ಸವರಿ ಆನೆಯ ಸೊಂಡಲಿನ ರಣಕೊಂಬನಾರ್ ಭೋರ್ಗರೆದರೋ ?
ಸವೆದು ಸವೆಯದ ಸಾಹಸತ್ವದ ಕ್ಷಾತ್ರ ಬೇಟೆಯ ಮೆರೆದರೋ ?

ಅವರು ಸ್ಫೋಲ್ ಸಾವರಿಯರು !
ಅವರು ಕಡುಗಲಿ ಗರಿಯರು !
ಅವರೆ ಕೊಡಗಿನ ಹಿರಿಯರು !

ತಮ್ಮ ನಾಡಿನ ಕೊರಳು ದಾಸ್ಯದ ನೊಗದ ಭಾರಕೆ ಬಗ್ಗದೋಲ್,
ಹೆಮ್ಮೆಹಗೆಗಳ ಹೊಡೆದು ಹಿರಿಯರು ಹಸಿದು ಹಾರುವ ಬಗ್ಗದೋಲ್,
ಬೊಮ್ಮಗಿರಿಯಿಂ ಪುಷ್ಪಗಿರಿ ಪರ್ಯಂತ ಬೆಳೆದೀ ದೇಶವು
ಧರ್ಮದಾನವ ಕಟ್ಟು ಕಟ್ಟಳೆ ರೀತಿ ನೀತಿಯ ಕೋಶವು !

ನಮ್ಮ ಕೊಡಗಿದು ಜಮ್ಮದು ;
ಜಮ್ಮ ಕೊಡಗಿದು ನಮ್ಮದು ;
ನಮ್ಮೊಡಲ್ ಬಿಡಲಮ್ಮದು !

ಇದು ಅಗಸ್ತ್ಯನ ತಪದ ಮಣೆ, ಕಾವೇರಿತಾಯ ತವರ್ಮನೆ,
ಕದನ ಸಿರಿಗುಯ್ಯಾಲೆ ತೂಗಿದನಿಲ್ಲಿ ಚಂದರವರ್ಮನೆ !
ಇದಕೋ ! ಚೆಂಗಾಳ್ವರಸರಾಡಂಬರವು ಕುಣಿದ ಶ್ರೀರಂಗವು !
ಇದೋ ! ಇದೋ ! ಇಲ್ಲುರುಳ್ದ ಹಾಲೇರಿಯರ ಬಲಗಿರಿಶೃಂಗವು !

ವಿಧಿಯ ಮಾಟದ ಕೊಡಗಿದು !
ಮೊದಲೆ ನಮ್ಮದು, ಕಡೆಗಿದು
ಕದಲದೆಮ್ಮನು ; ಬೆಡಗಿದು.

ಒಮ್ಮತವು ಒಗ್ಗಟ್ಟು ಒಂದೇ ಮನವು ಎಲ್ಲಿದೆ ಹೇಳಿರಿ ?
ಸುಮ್ಮನಿತ್ತರೊ ದಟ್ಟಿಕುಪ್ಪಸ ? ಹಾಡುಹುತ್ತರಿಗೇಳಿರಿ !
ಚಿಮ್ಮಿ ಪಾತುರೆಕೋಲ ಹೊಯ್ಲಿಗೆ ಕುಣಿವ ಪದ ಹೊರ ಹೊಮ್ಮಲಿ !
ಅಮ್ಮೆ ಹರಸಿದ ಸೀಮೆ ನಮಗಿದು ಇರಲಿ ನಮ್ಮದೆ ನಮ್ಮಲಿ !

ನೆಮ್ಮದಿಯನಿದು ತಾಳಲಿ !
ಅಮ್ಮೆಯಾ ಬಲತೋಳಲಿ !
ನಮ್ಮ ಕೊಡಗಿದು ಬಾಳಲಿ !

**ಕವಿಶಿಷ್ಯ**
(ಪಂಜೆ ಮಂಗೇಶರಾವ್

## ೨೧. ತೆಂಕಣ ಗಾಳಿಯಾಟ

ಬರಲಿದೆ! ಅಹಹಾ ದೂರದಿ ಬರಲಿದೆ-
ಬುಸುಗುಟ್ಟುವ ಪಾತಾಳದ ಹಾವೊ?
ಹಸಿವಿನ ಭೂತವು ಕೂಯುವ ಕೂವೊ?
ಹೊಸತಿದು ಕಾಲನ ಕೋಣನ-ಓವೊ!
ಉಸುರಿನ ಸುಯ್ಯೊ?- ಸೂಸೂಕರಿಸುತ,
ಬರುವುದು! ಬರಬರ ಭರದಲಿ ಬರುವುದು-

ಬೊಬ್ಬೆಯ ಹಬ್ಬಿಸಿ, ಒಂದೇ ಬಾರಿಗೆ
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ,
ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ,
ಅಬ್ಬರದಲಿ ಭೋರ್ ಭೋರೆನೆ ಗುಮ್ಮಿಸಿ,
ಬರುತಿದೆ! ಮೈತೋರದೆ ಬರುತದೆ! ಅದೆ-

ನಡು ಮುರಿಯುತ ನಗನಾವೆಗೆ, ಕೂವೆಗೆ
ಉಡಿಸಿದ ಹಾಯಿಯು ಹರಿಯುತ ಬಿರಿಯುತ,
ಹಡಗನು ಕೀಲಿಸಿ, ತುಮುರನು ತೇಲಿಸಿ,
ದಡದಲಿ ಝಾಡಿಸಿ, ದೋಣಿಯನಾಡಿಸಿ.
ಇದೆ! ಇದೆ! ಬರುತಿದೆ! ಇದೆ! ಇದೆ! ಬರುತಿದೆ-

ಹಕ್ಕಿಯು ಕಣ್ಣಿಗೆ ಧೂಳಿನ ಕಾಡಿಗೆ
ಇಕ್ಕುತ, ಹೊಲದೆತ್ತಿಗೆ ದನಕಾಡಿಗೆ
ಫಕ್ಕನೆ ಹಟ್ಟಿಗೆ ಅಟ್ಟಿಸಿ, ಕಾಡಿಗೆ
ಸಿಕ್ಕಿದ ಕಿಚ್ಚನು ಊದಲು ಹಾರುತ,
ಬರುತಿದೆ! ಇದೆ! ಇದೆ! ಇದೆ! ಬರುತಿದೆ-

ಸಡಲಿಸಿ ಮಡದಿಯರುಡಿಯನು ಮುಡಿಯನು,
ಬಡ ಮುದುಕರ ಕೊಡೆಗರಿ ಹರಿದಾಡಿಸಿ,
ಹುಡುಗರ ತಲೆ ತಲೆ ಟೊಪ್ಪಿಯ ಆಟವ
ದಡಬಡನಾಡಿಸಿ, ಮನೆ ಮನೆ ತೋಟವ
ಅಡಿಮೇಲಾಗಿಸಿ, ತೆಂಗನು ಲಾಗಿಸಿ.
ಅಡಕೆಯ ಬಾಗಿಸಿ, ಪನೆ ಇಬ್ಭಾಗಿಸಿ,

ಬುಡದೂಟಾಡಿಸಿ, ತಲೆ ತಟಾಡಿಸಿ
ಗುಡಿಸಲು ಮಾಡನು ಹುಲುಹುಲುಮಾಡಿಸಿ,
ಬಂತೈ ! ಬಂತೈ ! ಇದೆ ! ಇದೆ ! ಬಂತೈ !–

ಗಿಡ ಗಿಡದಿಂ-ಚೆಲುಗೊಂಚಲು ಮಿಂಚಲು-
ಮಿಡಿಯನು ಹಣ್ಣನು, ಉದುರಿಸಿ ಕೆದರಿಸಿ,
ಎಡದಲಿ ಬಲದಲಿ ಕೆಲದಲಿ ನೆಲದಲಿ,
ಪಡುವಣ ಮೋಡವ ಬೆಟ್ಟಕೆ ಗಟ್ಟಕೆ
ಹೊಡೆದಟ್ಟುತ, ಕೋಲ್ ಮಿಂಚನು ಮಿರುಗಿಸಿ,
ಗುಡುಗನು ಗುಡುಗಿಸಿ, ನೆಲವನು ನಡುಗಿಸಿ,
ಸಿಡಿಲನು ತಾಳೆಗೆ ಬಾಳೆಗೆ ಎರಗಿಸಿ,
ಜಡಿಮಳೆ ಸುರಿವೋಲ್, ಬಿರುಮಳೆ ಬರುವೋಲ್
ಕುಡಿ ನೀರನು ಒಣಗಿದ ನೆಲಕೆರೆವೋಲ್
ಬಂತೈ ಬೀಸುತ ! ಬೀಸುತ ಬಂತೈ !
ತೆಂಕಣ ಗಾಳಿಯು ಕೊಂಕಣ ಸೀಮೆಗೆ
ಬಂತೈ ! ಬಂತೈ ! ಬಂತೈ ! ಬಂತೈ !

**ಕವಿಶಿಷ್ಯ**
(ಪಂಜೆ ಮಂಗೇಶರಾವ್)

## ೨೨. ಹಾವಿನ ಹಾಡು

ನಾಗರಹಾವೆ ! ಹಾವೊಳು ಹೂವೆ !
ಬಾಗಿಲ ಬಿಲದಲಿ ನಿನ್ನಯ ಠಾವೆ ?
ಕೈಗಳ ಮುಗಿವೆ, ಹಾಲನ್ನೀವೆ
ಬಾ ಬಾ ಬಾ ಬಾ ಬಾ ಬಾ ಬಾ ಬಾ

ಹಳದಿಯ ಹೆಡೆಯನು ಬಿಚ್ಚೋ ಬೇಗಾ
ಹೊಳಹಿನ ಹೊಂದಲೆ ತೂಗೋ, ನಾಗಾ !
ಕೊಳಲನ್ನೂದುವೆ ಲಾಲಿಸು ರಾಗಾ
ನೀ ನೀ ನೀ ನೀ ನೀ ನೀ ನೀ ನೀ

ಎಲೆ ನಾಗಣ್ಣ, ಹೇಳಿಲೋ ನಿನ್ನಾ
ತಲೆಯಲಿ ರನ್ನವಿಹ ನಿಜವನ್ನಾ
ಬಲು ಬಡವಗೆ ಕೊಪ್ಪರಿಗೆಯ ಚಿನ್ನಾ
ತಾ ತಾ ತಾ ತಾ ತಾ ತಾ ತಾ ತಾ

ಬರಿಮೈ ತಣ್ಣಗೆ, ಮನದಲಿ ಬಿಸಿ ಹಗೆ,
ಎರಡೆಳೆ ನಾಲಗೆ ಇದ್ದರು ಸುಮ್ಮಗೆ
ಎರಗುವೆ ನಿನಗೆ, ಈಗಲೆ ಹೊರಗೆ
ಪೋ ಪೋ ಪೋ ಪೋ ಪೋ ಪೋ ಪೋ ಪೋ

**ಕವಿಶಿಷ್ಯ**
(ಪಂಜೆ ಮಂಗೇಶರಾವ್)

## ೨೩. ಕೊಂಬು

ಅರಳುಮಲ್ಲಿಗೆ, ಮಲ್ಲಿಗೆವಾಳು,
ಮಲ್ಲಿಗೇನಹಳ್ಳಿ;
ಸಿರಿಸಿ, ಸಂಪಿಗೆ, ಕೂಡುಮಲ್ಲಿಗೆ,
ಹುಲ್ಲಹಳ್ಳಿ, ಹರವು.
ಮೇಲು ಹುಲುವತಿ, ಕೀಳು ಹುಲುವತಿ
ಮೂದಲ, ಮುತ್ತೋಣಿ;
ತಾಳಕುಂಟೆ, ತಾವರೆಕೆರೆ, ಹಿಪ್ಪಲ,
ಕೂದವಳ್ಳಿ, ಕೊಪ್ಪ.
ಸಿರಿಯೂರು ಸಿರಿಯಂಗಳ, ಬೆಳವಲ,
ಸೊಗದವಾಣಿ, ತೆರವಿ;
ಮರಳವಾಡಿ, ಮಧುಗಿರಿ, ಬನವಾಸಿ,
ಅಗಳಿ, ಅಮೃತೂರು,
ಬೆಳಧರ, ಬೆಳ್ಳಿಯ ಬಟ್ಟಲು, ಬೆಳವಿ,
ನೆಲಮಾವು, ಹಗರಿ;
ತಳಕು, ಬೆಳುಗೊಳ, ಕಿರಿಜಾಜಿಯೂರು,
ಬಿಳಿಗೆರೆ, ಹೆಬ್ಬಾಲೆ.

ಪೂನಾಡು ಸಿರಿವಾಸಿ, ಸಕ್ಕರೆ,
   ನಿಶನ, ತಿಂಗಳೂರು ;
ಮಾಣಿಕಧರ, ಮಂಜೇಶ್ವರ, ಕೋಗಿಲೆ
   ಎಳಸೂರು, ಕಳಸ.
ಏನು ಹೆಸರು ಇವು, ನಮ್ಮ ತಾತದಿರು
   ನಾಡೊಳಿಟ್ಟ ಹೆಸರು ;
ಜೇನ ಸರಿಯುವೊಲು ಇನಿದು, ಬಲ್ಲವರ
   ಹಾಡಿನವೊಲು ಮೆಲಿತು.
ಕೇಳುವ ಕಿವಿ ನಲಿಯುತಲಿದೆ, ನುಡಿಯುವ
   ನಾಲಗೆ ನಲಿಯುತಿದೆ ;
ಬಾಳೆಂತಿರೆ ಹೆಸರಿಂತಾಯ್ತೆಂಬೆನೆ
   ಸೋಲುತಲಿದೆ ನೆನಸು.
ನಾಡೊಳಂದೊಗೆದ ಸೊಗದರವಿಂದದ
   ಮಾಧುರ ಮಕರಂದ
ಕೋಡಿಯಿಂದುದುರಿ ಹನಿ ಹರಳಾಯಿತು
   ಮೋದವೀಯಲಿಂದು.
ಅಣ್ಣ ತಮ್ಮದಿರೆ, ಅಕ್ಕತಂಗಿಯರೆ,
   ಹೇಳುವಿರೀ ಹೆಸರು ;
ಚೆನ್ನವಾಗಿಹುದು ಈಗಳ ಹೆಸರು ;
   ಬಾಳು ಅಂತೆ ಇಹುದೇ ?
ಚೆಲುವು ಹೆಸರುಗಳ ನುಡಿವ ನಾಲಗೆಯು
   ಬಾಳುವೆ ಬರಿದಾಯ್ತೇ.
ಕಳೆದುಕೊಂಡೆವೇ ಹಿರಿಮೆಯು ಚಂದ್ರನ,
   ಮುೞಳವಾಯ್ತೆ ಬದುಕು.
ಬನ್ನಿ ಅಣ್ಣದಿರೆ, ಬನ್ನಿ ತಮ್ಮದಿರೆ
   ಬನ್ನಿ ಸೋದರಿಯರೆ ;
ಬನ್ನಿರಿ ಎಲ್ಲರು ಆಣೆ ಇಟ್ಟುಕೊಳಿ
   ಚೆನ್ನ ಮಾಡಿ ಬಾಳ.
ಹೆಸರಿನ ಚೆಲುವನು ನಾಡಿನ ಬದುಕಲಿ
   ಮರಳಿ ಮೊಳೆಯಿಸಿರಿ ;
ಒಸಗೆಯು ತನ್ನಿರಿ ತಾಯ್ನಾಡಿರವಿಗೆ,
   ತರಿಸಿ ನಗೆಯ ಮೊಗಕೆ.

ದುಡಿಯುವೆವೆನ್ನಿರಿ ದುಡಿಯಿರಿ ಬನ್ನಿರಿ
   ನಾಡಿಗೆ ನುಡಿಗಾಗಿ :
ತೊಡಿರಿ ಹಟವನು ಕೊಡಿ ಕೈಯಾಣೆಯ ;
   ಆಡುವ ನುಡಿ ನಡೆಸಿ-

ಕತ್ತಲು ಮುಚ್ಚಿಹ ಬಾಳಿರುಳಾಳಕೆ
   ಆಸೆಯ ಚಂದ್ರನನು
ಮತ್ತೆ ತನ್ನಿರಿ, ಬೆಳಕಲಿ ನಡೆಯಿರಿ ;
   ಹೇಸಿ ಸೋಂಬತನವ.

ಮುತ್ತು ಮಾಣಿಕವ ಜೋಳದ ತೆರದಲಿ
   ಹರಿಯಿಸಿ ನಾಡಿನಲಿ ;
ಉತ್ತಮ ಚರಿತೆಯ ಚಿತ್ರಪತಾಕೆಯ
   ಮೆರೆಯಿಸಿ ಬಾನಿನಲಿ.

ಶ್ರೀನಿವಾಸ
(ಮಾಸ್ತಿ ವೆಂಕಟೇಶ ಅಯ್ಯಂಗಾರ್)

## ೨೪. ಕೋಗಿಲೆ

ಕೋಗಿಲೆ ! ಕೋಗಿಲೆ !
   ಎಂಥ ಹೆಸರು ಊರಿಗೆ !
ಹೇಗೆ ಇಹುದೊ, ಎನಿತು ಸೊಗಸೊ,
   ಇಂತ ಹೆಸರ ಊರದು !

ಕೊಟಗೆಹರ ತೆರುವಿಗೆ
   ಏಳು ಕೂಗು ದೂರದೆ,
ಎಟುಕಿಸಿಕೊಳಬಹವೊಲಿರುವ
   ಮಾಲೆಯಾದ ಮಲೆಯೆಡೆ ;

ಮೂರು ನೀರನುಳಿಯುತ
   ಮಲೆಯ ತಲೆಯ ಮುಟ್ಟುತ
ಧೀರವಾಗಿ ಪಡುವಣಿಂದ
   ಸುಳಿಯುವೆಲರೊಳಾಡುತ ;

ತಳಿರು ಹೂವು ಸೊಗೆಯಿಸೆ
  ಪರಿಮಳಿಸುವ ವನದಲಿ;
ಮಲೆಯ ನೀರು ಸೇರಿ ನಡೆವ
  ಸರಳಿನೊಂದು ಬದಿಯಲಿ;

ಅಲ್ಲಿ ಇಹುದು ಕೋಗಿಲೆ;
  ಎಂತ ಸೊಗಸ ಊರದು!
ಮೆಲ್ಲನುಸುರು ಹೆಸರನು;
  ಅಂತ ಸೊಗಸು ಹೆಸರದು.

ತಳಿರ ಮರೆಯೊಳಿರುತ ಕರೆದು
  ಕಾಣದಿಹುದೆ ಕೋಗಿಲೆ;
ಸಲುವುದಿದೇ ಬಣ್ಣನೆ
  ಜಾಣು ನಮ್ಮ ಊರಿಗೆ.

ಉಳಿದ ಊರು ಮನೆಯ ಗುಂಪು,
  ಕಡೆಗೆ ಎರಡು ಮರಗಳು;
ಮಲೆಯ ವನವೆ ಊರು ಇಲ್ಲಿ;
  ನಡುವೆ ಎಲ್ಲೊ ಮನೆಗಳು.

ಉಳಿದ ಊರು ಬರಿಯ ಜನದ
  ಬಾಳು ಬೀಳು, ಕೋಗಿಲೆ
ಎಲರ ಮಲರ ಕಂಪು ಸೊಂಪು
  ಮೇಳವಿಸಿದ ತೋಂಟವು.

ಪಾರಿವಗಳ ಕೂಜನದ
  ಗಿಳಿಯ ನಲವ ಕೂಗಿನ,
ನೂರು ತೆರನ ಹಕ್ಕಿಯ
  ಉಲಿವ ಮೇಳ ಕೋಗಿಲೆ.

ಹೇರಿಳೆ ಮಲ್ಲಿಗೆ
  ಜೇನುಹೂವ ಬಳ್ಳಿಯ
ಬೇರಿನಿಂದ ಕಾವ ಹಲಸ
  ತಾಣ ನಮ್ಮ ಕೋಗಿಲೆ.

ನನ್ನ ಜನದ ಮನದ ನಯ
ಸಂತಸವನು ಸಾರುವ
ಚಿನ್ನದಂತ ಹೆಸರ ಪೆರೆವ
ಶಾಂತಿಯೋಣಿ ಕೋಗಿಲೆ

ಕೋಗಿಲೆ ! ಕೋಗಿಲೆ !
ಎಂತ ಹೆಸರು ಊರಿಗೆ !
ಹೋಗಿ ನೋಡು, ಊರನು,
ಶಾಂತಿಯೊಂದು ನೆಲೆಯನು.

**ಶ್ರೀನಿವಾಸ**
(ಮಾಸ್ತಿ ವೆಂಕಟೇಶ ಅಯ್ಯಂಗಾರ್)

## ೨೫. ಶಿವನಸಮುದ್ರ

ಗಿರಿಯ ಕೆಲದಿ ಬನದ ನಡುವೆ ಝರಿಯ ತೆರದಿ ಸುಳಿದು ಬರುತೆ
ತಲದ ಶಿಲೆಯನಿರಿದು ಕೊರೆದು ಕೆಲದ ನೆಲವನರೆದು ಮುರಿದು
ವಿಮಲಜಲದ ವಿಪುಲಧಾರೆಯಮೃತಲಹರಿಯಂತೆ ತೋರೆ
ದಣಿವ ಕಳೆಯುವೆಲರ ಬೀರಿ ಮೃದುಲ ರವದಿ ಮುಂದೆ ಸಾರಿ
ಅತ್ತಲತ್ತ ಸುಳಿದು ಸುತ್ತಿ ಇತ್ತಲಿತ್ತ ಮೆಲ್ಲನೊತ್ತಿ
ಅಲ್ಲಿ ಬಳುಕುತಿಲ್ಲಿ ಬಾಗಿ ಅಲ್ಲಿ ಬಳಸುತಿಲ್ಲಿ ಸಾಗಿ
ನೊರೆಯ ಸೇಸೆಗಳನು ಸೂಸಿ ತೆರೆಯ ಚವರಗಳನೆ ಬೀಸಿ
ಬಾಲೆಯಂತೆ ನಲಿದು ಕುಣಿದು ಕಾಳಿಯಂತೆ ಕನಲಿ ಮೊರೆದು
ಉರಗಿಯಂತೆಯುರುಗಿ ತಿರುಗಿ ಛಲದ ಭರದಿ ಸರಿದು ಮಸಗಿ
ಬೆಟ್ಟದಿಂದಲುರುಳಿ ಹೊರಳಿ ದಿಟ್ಟತನದಿ ತೊಳಗಿ ಬೆಳಗಿ
ಘೋರವೇಗದಿಂದ ನೆಗೆದು ಭೋರೆನುತ್ತೆ ಮಂಜನೆಸೆದು
ಪನಿಯ ಮುಗಿಲ ಕವಿಸಿ ಸರಿದು ಮನುಜಸೇವೆಯಿಂದಲೊಲಿದು
ಬಲವ ಬೆಳಕ ನೀಡುತುಂ ನಿಲದೆ ನಾಟ್ಯವಾಡುತುಂ
ನುಗ್ಗಿ ಬೀಳುತೇಳುತುಂ ನೆಗೆದು ಪಾರುತೋಡುತುಂ
ಭುವನರಚನೆಯೆನಿತು ಕುತುಕವೆನುತ ಜನಕೆ ಸಾರುತುಂ
ಭುವನಜನನಿಯೆನಿತು ಚತುರಳೆನುತ ಕಣ್ಗೆ ತೋರುತುಂ

ಪುರುಷಬಲವ ಬೆಳಗಿರೆನುತ ಜಡರ ಪಳಿದು ಮೊಳಗುತುಂ
ಪರಿವಳೀ ಕವೇರತನಯೆ ಧೀರಜನನಿಯೆನಿಸುತುಂ
ಕನ್ನಡ ನಾಡಿನ ಕುತುಕಂ
ಕನ್ನಡಿಗರ ಸಾಹಸಕ್ಕೆ ಕನ್ನಡಿ ಮೇಣೀ
ಕನ್ನಡಿಗರ ಭಾಗ್ಯದ ನಿಧಿ
ಯುನ್ನತಿಯುಂ ಪಡೆದು ಬಾಳ್ಗೆ ಶಿವನಸಮುದ್ರಂ

ಡಿ. ವಿ. ಗುಂಡಪ್ಪ

## ೨೬. ಲಲಿತಾದ್ರಿ

ತಿರೆಯ ಹೋರಾಟದಲಿ
ಬಗೆ ಕದಡಿ ಕಂಗೆಡಲು,
ನೇಹಿಗನೆ, ಬಾ, ಇಲ್ಲಿ
ಶಾಂತಿಯಿಹುದು !

ತಂಬೆಲರ ತೀಟವಿದೆ
ಬಳಲಿಕೆಯ ಪರಿಹರಿಸೆ ;
ಮೋಹಿಸಲು ಕಂಗಳನು
ಪರಮ ಸೌಂದರ್ಯವಿದೆ ;
ಜೀವವನು ಸಂತವಿಸೆ
ದೇವಸಾನ್ನಿಧ್ಯವಿದೆ !
ಸೋದರನೆ, ಬಾ, ಇಲ್ಲಿ ;
ಧನ್ಯನಾಗುವೆ ಇಲ್ಲಿ,
ಪೂರ್ಣನಾಗುವೆ ಇಲ್ಲಿ ;
ಬೆಟ್ಟದಲ್ಲಿ.

ಬೆಂಗದಿರ ಮುಳುಗುತಿರೆ
ಬೈಗುಗೆಂಪಳಿಯುತಿರೆ,
ಮುಚ್ಚಂಜೆ ಮುಸುಗುತಿರೆ

ಕತ್ತಲೆಯು ಕವಿದುಬರೆ
ಪಯಣಿಗನೆ, ಬಾ, ಇಲ್ಲಿ
ನಿಂತು ನೋಡು !

ಮೂಡಲನು, ಪಡುವಲನು,
ತೆಂಕಲನು, ಬಡಗಲನು,
ಗಗನವನು, ಭೂಮಿಯನು,
ಮನದಣಿಯೆ, ಕಣ್‌ತಣಿಯೆ,
ಎದೆಯರಳಿ ಮೈಮರೆಯೆ
ತೂಣಗೊಂಡವನಂತೆ
ನಿಂತು ನೋಡು !

ಕಂಬನಿಗಳಿಳಿಯುತಿರೆ,
ಮೈನವಿರು ನಿಮಿರುತಿರೆ,
ಎದೆಯಲರು ಅರಳುತಿರೆ,
ಮೋಣಂತರಂಗದಲಿ
ಹೊಸ ಬೆಳಕು ಮೂಡಿಬರೆ,
ಬಣ್ಣನೆಗೆ ಬಾರದಿಹ
ಚೆಲುವನವಲೋಕಿಸಲು
ಮಾತು ಮೈದೆಗೆಯುತಿರೆ,
ಬಾಳೆಲ್ಲ ಹಿಗ್ಗಿಬರೆ,
ದೇಹಪಂಜರದಲ್ಲಿ
ಜೀವ ಹೋರಾಡುತಿರೆ,
ಬಾ ಇಲ್ಲಿ, ನೇಹಿಗನೆ,
ಮೌನದಲಿ ಮಮತೆಯಲಿ
ನಿಂತು ನೋಡು !

ಹುಣ್ಣಿಮೆಯ ದಿನದಲ್ಲಿ
ಪೂರ್ವ ದಿಗ್ದೇಶದಲಿ,
ದೂರ, ಬಹುದೂರದಲಿ
ಮಬ್ಬಿನ ದಿಗಂತದಲಿ
ದುಂಡಾಗಿ, ಕೆಂಪಾಗಿ,
ಸುಂದರ ಸುಧಾಕರನು
ಮೂಡಿ ಮೇಲೇಳುತಿರೆ,

ಸುತ್ತಲಿಹ ಬಯಲುಗಳ
ಹಸುರಾದ ಹೊಲಗಳನು
ಅಲ್ಲಲ್ಲಿ ಮೆರೆಯುತಿಹ
ಬಿತ್ತರದ ಜಲಗಳನು
ಕೌಮುದಿಯು ಮುತ್ತುತಿರೆ,
ಚಂದ್ರಿಕೆಯು ಬೆಳಗುತಿರೆ,
ಬೆಳ್ದಿಂಗಳೆಸೆಯುತಿರೆ,
ಮೌನ ಮಿತಿಮೀರುತಿರೆ,
ಧ್ಯಾನ ಬಗೆವುಗುತಲಿರೆ,
ನಿಂತಿಲ್ಲಿ ನೇಹಿಗನೆ
ಚೆಲುವ ನೋಡು !

ತಾರೆಗಳ ದಿಬ್ಬಣವು
ಗಗನದಿಂದೈತಂದು
ಬೆಟ್ಟದುದಿಯಲಿ ತಳುವಿ
ಸೋಪಾನಗಳನಿಳಿದು
ತಪ್ಪಲಲಿ ಮೇಳವಿಸಿ
ಕವಿದು ಕಿಕ್ಕಿರಿದಂತೆ,
ಬುವಿ ಬೆಸಲೆಯಾದಂತೆ
ಚುಕ್ಕಿಗಳ ತಿಂತಿಣಿಯು
ತೆಕ್ಕನೆಯೆ ಪೆತ್ತಂತೆ,
ಸಗ್ಗ ನೆಲಕಿಳಿದಂತೆ,
ಬಾನಿಳೆಗೆ ಬಿದ್ದಂತೆ
ನೂರಾರು ದೀಪಗಳು
ಮಿಣಕುತಿಹ ಸೊಡರುಗಳು,
ಸಾಲಾಗಿ, ಡೊಂಕಾಗಿ,
ಗುಡಿಗಟ್ಟಿ ಕೊಂಕಾಗಿ,
ಗೊಂಚಲಲಿ ಗುಂಪಾಗಿ,
ತೆಕ್ಕನೆಯೆ ಹುಟ್ಟಿಬರೆ,
ಪತ್ತನದಿ ಮಿಂಚಿಬರೆ,
ಬೆರಗಾಗಿ ಮರುಳಾಗಿ
ಬಾ ನೋಡು ನಿಂತಲ್ಲಿ
ಮೂಕನಾಗಿ !

ತಾರೆಗಳ ತವರೂರು
ಸಿಂಗರದ ಮೈಸೂರು
ಕನ್ನಡದ ಕುಶಲತೆಗೆ
ಕನ್ನಡದ ರಸಿಕತೆಗೆ
ಕನ್ನಡದ ನಿಪುಣತೆಗೆ,
ಕನ್ನಡಿಯು ಮೈಸೂರು !
ಕನ್ನಡಿಗರೆದೆಯರಿಯೆ,
ಕನ್ನಡಿಗರೊಲವರಿಯೆ,
ಕನ್ನಡಿಗರಿಂಪರಿಯೆ,
ಸೋದರನೆ, ನೇಹಿಗನೆ,
ಲಲಿತ ಲಲಿತಾದ್ರಿಯಲಿ
ನಿಂತು ನೋಡು !

ಕಬ್ಬಗಳ ಕಟ್ಟುವೊಡೆ
ಕಬ್ಬಿಗನೆ ಬಾ ಇಲ್ಲಿ ;
ಗಾನವನು ಹಾಡುವೊಡೆ
ಗಾಯಕನೆ, ಬಾ ಇಲ್ಲಿ ;
ವೀಣೆಯನು ಮಿಡಿಯುವೊಡೆ
ಬಾ ಇಲ್ಲಿ ವೈಣಿಕನೆ ;
ಧ್ಯಾನವನು ಮಾಡುವೊಡೆ
ಬಾ ಇಲ್ಲಿ ತಾಪಸನೆ ;

ಬಣ್ಣದಲಿ ಭಾವಗಳ
ಬಣ್ಣಿಪೊಡೆ ಬಾ ಇಲ್ಲಿ
ವರ್ಣಶಿಲ್ಪಿ !

ದೇಗುಲವು ಭಕ್ತರಿಗೆ,
ಉಪವನವು ರಸಿಕರಿಗೆ,
ಲೌಕಿಕರಿಗಿದು ಸಗ್ಗ
ವೈದಿಕರಿಗಿದು ಮುಕ್ತಿ-
ಲಲಿತಗಿರಿಯು !

**ಕೆ. ವಿ. ಪುಟ್ಟಪ್ಪ**

## ೨೭. ಲಾಲ್‌ಬಾಗ್

ಕೆಂಪೂವು ಸಾಲ್ಮರನ ದಾರಿಯಲಿ ನಡೆನಡೆದು
ಕೆಂಪು ತೋಟಕೆ ಬನ್ನಿ ವಿಶ್ರಾಂತಿಗೆ ;
ಒಮ್ಮೆಗೇ ಕಾಣುವುವು ಬಿಳಿ ಹಸುರು ಕೆಂಪುಗಳು
ಕಣ್ಣ ರಂಜಿಸಿ ಕೊಳುವ ಎಲ್ಲ ರಂಗುಗಳು.
ಎಲ್ಲೆಲ್ಲು ತಳಿರು ಹೂ ಎಲ್ಲೆಲ್ಲು ಹಸುರುಗಳು
ಹಸುರು ಹೊಂಗೆಂಪುಗಳ ಮೇಲಾಟವು
ಮರದ ಇಂಬಿಗೆ ಬಾಗಿ ಬಳುಕುತಿರುವೆಳಲತೆಯು
ತಳಿರ ತೂಗುಯ್ಯಾಲೆ ಹೂ ತೊಂಗಲು.
ನಾ ಮುಂದೆ ತಾ ಮುಂದೆ ಎಂಬ ಆತುರದಿಂದ
ಹೋದ ತಿಂಗಳೆ ತೋಟ ಚಿಗುರಿಟ್ಟಿತು ; –
ಮಾವು ಹೊಂಗೆಯು ಬೇವು ಮಾಧವೀಲತೆ ಬೇಲ
ದೂರದೇಶದ ಸುಳಿಯು ನೂರು ಜಾತಿಗಳು.
ಒಂದೊಂದೆ ಸೊಗವೆತ್ತಿ ತಂಪೆತ್ತಿ ಚಿಗುರಿದುವು
ಬರಲು ಕೊಂಬೆಗಳೆಲ್ಲ ಹಸುರುಟ್ಟವು
ತಳಿರ ಮೈಯನು ತೆರೆದು ನಿನ್ನೆ ಕಾಣಿಸುತಿದ್ದ
ಈ ಮರನು ಮೈತುಂಬ ಅರಳಿರುವುದು–
ಅಡಿಯಿಂದ ತುದಿವರೆಗು ಎಲೆಯೆ ಕಾಣಿಸದಂತೆ
ಕಿಕ್ಕಿರಿವ ಹೂವಿನಲಿ ನಗುತಲಿಹುದು ;
ಒಂದು ರಾತ್ರಿಯ ಸುಖದ ಸದನದಲಿ ಲಲ್ಲೆಯಲಿ
ಬಂದ ಪುಳಕಗಳಿದನು ಬಿರಿಯಿಸಿಹವು.
ನೆಲದ ಆಳದಲೆಲ್ಲೊ ಒಡಲಿನಾಳದಲೆಲ್ಲೊ
ಕಾಣದೆಡೆಯಲಿ ಹುದುಗಿ ಕಾಪಾಡಿದ
ತಂಪನ್ನು ಕಂಪನ್ನು ಜೀವವನು ರಸವನ್ನು
ಕೊಂಬೆ ಕೊಂಬೆಗು ಇಡಿದು ಅರಳಿಸಿಹುದು-
ಇದರ ಮುಡಿಲೊಳಗಿಂದ ಅದರ ತುದಿಯೆಲೆಯಿಂದ
ತೂಗಿ ಜೋಲಾಡುತಿಹ ಹೂಗೊಂಚಲಿಂದ
ಕೈನೀರ ಹುಯ್ಯುತ್ತೆ ಬೆಳೆಸಿರುವ ಲತೆಯಿಂದ
ಪರದೇಶಗಳ ಹೂವು ಕಾವಣಗಳಿಂದ–
ಉಲಿಯುತಿವೆ ನಲಿಯುತಿವೆ ಚೀರುತಿವೆ ಕೂಗುತಿವೆ
ಕಣ್ಮುಚ್ಚಿ ಕೊರಲೆತ್ತಿ ಹಿಗ್ಗಿ ಹಾಡುತಿವೆ

ನೂರಾರು ದನಿಗಳಲಿ ಏರಿನಲಿ ತಗ್ಗಿನಲಿ
ಷಡ್ಜದಲಿ ಮಂದರದಿ ತಾರ ಮೂರರಲಿ
ಗಿಳಿಯು ಸಂಪಿಗೆಯಿಂದ ಕೋಗಿಲೆಯು ಮಾವಿಂದ
ತುಂಬಿಗಳು ಕತ್ತಲೆಯ ಸುರಹೊನ್ನೆಯಿಂದ
ಹಸುಳೆ ಚೆಂಗುಡಿಗೈಯ ಮೃದುಲತೆಯ ಮೀರಿಸುವ
ನರೆವೈಯ ಕೆಂಗಣ್ಣ ಹಕ್ಕಿ ಕೊಳದಿಂದ.
ಹೊಂಬಕ್ಕಿ ಕೆಂಬಕ್ಕಿ ಪಚ್ಚೆವಣ್ಣದ ಹಕ್ಕಿ
ಲೆಕ್ಕವಿಲ್ಲದ ರಂಗು ಚುಕ್ಕೆವಕ್ಕಿ
ಕಿರಿಗೊರಲ ಹೆಗ್ಗೊರಲ ಸವಿಗೊರಲ ಕಟುಗೊರಲ
ಬಿರಿಗೊರಲ ಕಿರಿಚಿನಲಿ ಕೀರ್ವ ಹಕ್ಕಿ.
ಮಧುಮಾಸವೆಲ್ಲಿದ್ದರಲ್ಲೋಡಿ ಕಲೆಯುತ್ತೆ
ಇಲ್ಲಿ ಚೈತ್ರವು ಬರಲು ಬರುವ ಹಕ್ಕಿ
ಸುಗ್ಗಿ ಸೊಬಗನ್ನುಳಿದು ಇರಲಾರೆನೆನುತ್ತೆ
ದೇಶ ದೇಶಗಳಲೆವ ವಲಸೆವಕ್ಕಿ.
ಎಲ್ಲವೂ ಕರೆಯುತಿವೆ ವನಕೆ ನೆಳಲಾಸರೆಗೆ
ನೆಲದಲ್ಲಿ ಸುರಿದಿರುವ ಹೂವು ಹಾಸಿಗೆಗೆ
ಮೇಲಿಂದ ಬೇಯಿಸುವ ಬೇಸಗೆಯ ನೇಸರಿನ
ಹಿಂಸೆಗಳ ನೀಗಿಕೊಳಿರೆನ್ನುತ್ತಿವೆ.
ಕೇಳಿ, ಕೇಳಿರಿ ಅವನು, ಹುಯಿಲು ಮಾರುಲಿಗಳನು
ಒಡಲ ಸಂತಸ ಸೂಸಿ ಸಾರ್ವ ಕಲೆಗಳನು
ದಿನದುಣಿಸ ತರುವುದಕೆ ಹೋಹುದನು ಮರೆತಿಲ್ಲಿ
ಹುರುಡಿನಲಿ ಹಬ್ಬವನು ನಡಸುತ್ತಿವೆ.
ಎಳೆಯ ಮಾವಿನ ಚಿಗುರನಗಿದಿರುವ ಕೋಗಿಲೆಯು
ಮದದೊಂದೆ ಉಸಿರಲ್ಲಿ ಒರಲುತ್ತಿದೆ ;
ಗೋಣಿಯಿಂದಾಲಕ್ಕೆ ಆಲದಿಂ ಬೂರುಗಕೆ
ಹಾರಾಡಿ ಗಿಳಿಮರಿಯು ಮುದ್ದಿಡುತಿವೆ.
ಹಕ್ಕಿ ಹೂತಳಿರುಗಳ ಹರಡು ಸೌಂದರ್ಯಗಳ
ಸುಗ್ಗಿ ಸಂಭ್ರಮದಲ್ಲಿ ಆಳಿ ಬನ್ನಿ
ಮಧುಮಾಸದೀ ಸವಿಯ ಬೆಡಗು ಹೋಹುದು ಬೇಗ
ನಡೆವಾಗ ಇದನುಣಲು ಓಡಿಬನ್ನಿ.

ವಿ. ಸೀ.
(ವಿ. ಸೀತಾರಾಮಯ್ಯ)

## ೨೮. ಮಡಿಕೇರೀಲಿ ರತ್ನ

ಮಡಿಕೇರೀಲಿ ರತ್ನ
ಕಂಡಾ ಒಸಾ ಮತ್ನ
‘ ಮಡಿಕೇರೀಲಿ ಮಡಿಕೆ ಯೆಂಡ
ಈರ್ದಿದ್ರು ಅಲ್ಲೀಗ್ ಓದ್ದೂ ದಂಡ ’
ಅಂದಿ ರತ್ನ ಪಡಕಾನೇಗೆ
ಒಂಟ, ಬೆಟ್ಟದ ನೆತ್ತಿಮ್ಯೇಗೆ
ಓಯ್ತಿದ್ದಂಗೆ ನಿಂತ !
ಕಲ್ಲಾದಂಗೆ ಕುಂತ !
ಸುತ್ತ ಸಾಯೋ ಬಿಸಿಲಿನ್ ಚಾಪೆ !
ಅಲ್ಲಲ್ಲೆ ಒಸಿ ನೆರಳಿನ್ ತೇಪೆ !
ಅಲೆಯಲೆಯಾಗಿ ಬಿಸಿಲಿನ್ ಜೊತೆಗೆ
ಸುತ್ತಿನ್ ಗುಡ್ಡಗೊಳ್ ಕುಣದರ್ ಮೆತ್ಗೆ
ಮನಸೀಗ್ ಅರ್ಸ ತರ್ಸ–
ರತ್ನ ಯೆಂಡ ಮರ್ತ !
‘ ಮುದುಕರ್ ಸಾವೇ ನೋಡಾಕ್ ಚಂದ ’ !
ಅಂದ್ರೆ ಸೂರ್ಯ ಸಾಯಾಲೇಂದ ;
‘ ಸಾಯೋ ಮುದಕ ಸಂಜೆ ಸೂರ್ಯ
ನೆಗತ ನಿಲ್ಲೋಕ್ ಇವ್ನೇನ್ ಕಾರ್ಯ ? ’
ಅಂತ ಇಂದಕ್ ತಿರ್ಗಿ
ನೋಡ್ದೆ–ಬತ್ತು ಗಿರ್ಕಿ !
ದೇವರದೊಂದು ಚೆಂದದ್ ಸೋತ್ರ
ಕೊಡಗಿನ್ ಮೇಗಿನ್ ಒಂದ್ ನಕ್ಸತ್ರ
ಕೊಡಗಿನ್ ಒಂದ್ ಊ ಗಾಳೀಲ್ ತೇಲ್ತ
ಬಂದಂಗಿದ್ಲು ಅತ್ರ ಕಾಲ್ತಾವ್
ಒಂದು ಕೊಡಗೀನುಡಗಿ !
ಐದಾರೊರಸದ್ ಉಡಗಿ !
ಕೊಡಗಿನ್ ತೋಟದ್ ಕಾಪೀ ಅಣ್ಣು
ತುಟಿಗೊಳ್ ! ಇಳ್ಳಿನ್ ಬೆಳಕೆ ಕಣ್ಣು !
ಕೆನ್ನೆ ಅನಕ ಕೊಡಗಿನ್ ಕಿತ್ಲೆ !
ಔಳೇಳಿದ್ಲು ನಾ ಕೇಳೂತ್ಲೆ :
‘ ನಿಂಗೆ ಯೆಸರೇನಮ್ಮ ? ’
‘ ನನ್ನೆಸರು ಪೂವಮ್ಮ ! ’

‘ ಪೂವಮ್ಮ ! ’ ಹಾ ! ಎಂತಾ ಯೆಸರು !
ಕಣ್ಣಿಗ್ ಚಿತ್ರ ಕಟ್ಟೋ ಯೆಸರು !
ರೂಪು ರಾಗಕ್ ತಕ್ಕಂತ್ ಯೆಸರು !
ಎಂಗ್ ನೋಡಿದ್ರು ಒಪ್ಪೋ ಯೆಸರು !
‘ ಪೂವಮ್ಮಾ ! ಪೂವಮ್ಮಾ ! ’
‘ ಪೂವಮ್ಮಾ ! ಪೂವಮ್ಮಾ ! ’
ಔಳ್ ನೋಡೂತ್ಲೆ ನಂಗ್ ಮತ್ತಾಯ್ತು !
ಔಳ್ ಮಾತ್ಕೇಳಿ ಒಂದ್ ಅತ್ತಾಯ್ತು !
ಔಳ್ ಮಾತ್ ಇನ್ನ ಕೇಳ್ಬೇಕೊಂತ
‘ ನಾನ್ಯಾರ್ ಗೊತ್ತೆ ? ’ ಅಂದ್ರೆ ‘ ಹ್ಞೂ ’ಂತ
‘ ನೀ ಯೆಂಡಕುಡುಕ ’ ಅಂದ್ಲು
ನೆಗ್ತ ಅತ್ರ ಬಂದ್ಲು.
‘ ನೀ ನಾ ಕುಡಿಯೊದ್ನ ಎಲ್ ನೋಡ್ದೇಮ್ಮ? ‘
ಅಂದ್ರೆ, ‘ ಯಾವೋನ್ಗೈತೆ ಜನ್ಮ
ಔನ್ಗೆ ಯೇಳ್ತೀವ್ ಕೊಡವಾಂತಂದಿ !
ಕುಡದಂಗ್ ಆಡೋನ್ ಕುಡುಕಾ ’ಂತ್ ಅಂದಿ !
ತೊಡೇನ್ ಅತ್ತಿದ್ಲು ಮೆಲ್ಗೆ !
ಕುಡುದೋನ್ ಅಂದ್ರೆ ಸಲ್ಗೆ !
ಕತ್ತಿನ್ ಸುತ್ತ ಕೈ ಆಕ್ಕೊಂಡಿ
‘ ಅಣ್ಣ ರತ್ನ ’ ಅಂತ್ ಸೆಕ್ಕೊಂಡಿ
ಯೆಂಡದ ಪದಗೊಳ್ ಏಳ್ ನೋಡಾನೆ !
ನಾನು ನಿನ್ನಂಗ್ ಕಲ್ತ್ ಆಡಾನೆ ! ’
ಅಂದ್ಲು ಮೊಕಾನ್ ನೋಡಿ
ಕಣ್ಣ ದೊಡ್ದು ಮಾಡಿ !
ಇಲ್ದಿದ್ ತಂಗಿ ಆಗ್ ವುಟ್ಟಿದ್ಲು
ಪೂವಮ್ಮಾನೆ ನಂಗೆ ಮೊದ್ಲು !
ತಂಗಿ ವುಟ್ಟಿದ್ ದಿವಸಾಂತೇಳಿ
ಆಡ್ದೆ ಯೆಂಗೀಸ್ ಇಡದಂಗ್ ತಾಲಿ-
ಸೂರ್ಯ ಮುಳುಗಿದ್ ಕಾಣ್ದೆ
ಯೆಂಡ ಬೇಕಂತ್ ಅನ್ದೆ

ರತ್ನ
(ಜಿ. ಪಿ. ರಾಜರತ್ನಂ)

## ೨೯. ಕುಮಾರವ್ಯಾಸ

ಕುಮಾರವ್ಯಾಸನು ಹಾಡಿದನೆಂದರೆ,
ಕಲಿಯುಗ ದ್ವಾಪರವಾಗುವುದು !
ಭಾರತ ಕಣ್ಣಲಿ ಕುಣಿವುದು ; ಮೆಯ್ಯಲಿ
ಮಿಂಚಿನ ಹೊಳೆ ತುಳುಕಾಡುವುದು !
ಆ ಕುರುಭೂಮಿಯು ತೋರುವುದು ;
ಆ ರಣರಂಗದಲಿ,
ಆ ಸಂಗ್ರಾಮದಲಿ,
ಪಟುಭಟರಾರ್ಭಟ ಕೇಳುವುದು !
ಮೈ ನವಿರೇಳುವುದು !
ಹೊಳೆಯುವ ಕೈದುಗಳಾಟದಲಿ,
ಕಲಿಗಳ ಕದನದ ಕೂಟದಲಿ,
ತಾಗುವ ಗದೆಗಳ ಸಂಘಟ್ಟಣೆಯಲಿ,
ರಥಚಕ್ರಧ್ವನಿ ಚೀತ್ಕಾರದಲಿ,
ಸಾಯ್ವರ ಶಾಪದಲಿ,
ಬೀಳ್ವರ ತಾಪದಲಿ
ನಸುಸೋತಿರುವರ ಕೋಪದಲಿ,
ನೆರೆ ಗೆದ್ದಿಹರಾಟೋಪದಲಿ,
ಕೆನೆಯುವ ಹಯಗಳ ಹೇಷಾರವದಲಿ,
ಕಿವಿ ಬಿರಿಯುವುದು !
ಎದೆ ಮುರಿಯುವುದು !
ಬಸಿಯುವ ಮಜ್ಜೆಯ ಪಂಕದೊಳೂಡಿ
ಚಿಮ್ಮುವ ರಕ್ತದ ಬುಗ್ಗೆಯ ನೋಡಿ
ಕಣ್ಮೊಡೆಯುವುದು !
ಮೈ ನಡುಗುವುದು !
ಕೇಳಿರಿ ! ಪಾರ್ಥನ ಸಾರಥಿಯು
ರಣ ಗೀತೆಯನು,
ರಣ ನೀತಿಯನು,
ಬೋಧಿಸುವನು ನಿರ್ಭೀತಿಯನು !
ಕುರುರಂಗದ ಶರಶಯ್ಯೆಯಲಿ
ಭೀಷ್ಮನು ಮಲಗಿಹನು !

ಹೆಣಗಳ ಬಣಬೆಯ ಮಂಚದಲಿ
ದ್ರೋಣನು ಬಿದ್ದಿಹನು !
ನೆತ್ತರವೀಂಟುತಲಿರುವನು ಭೀಮನು
ಅಯ್ಯೋ, ನೋಡಲ್ಲಿ !
ರಥದಿಂದುರುಳುತಲಿರುವನು ಕರ್ಣನು,
ಹಾ ! ಹಾ ! ನೋಡಿಲ್ಲಿ !
ರಣಚಂಡಿಯು ಆ ಬೆಂಕಿಯ ಮಗಳು
ಹೆಣ್ಣಿನ ರೂಪದ ಬರಸಿಡಿಲವಳು !
ಮುಗುಳ್ನಗೆ ಬೀರುತ ನೋಡಿಲ್ಲಿ
ನಿಂತಿರುವಳು ರಣರಂಗದಲಿ
ದ್ರೌಪದಿ ಮುಡಿಗೆದರಿ !
ವೈಶಂಪಾಯನ ಸರಸಿಯ ತೀರದಿ
ತೋರುವರಾರಲ್ಲಿ !
ಕೌರವದೇವನು ಸಿಡಿಲಾಗಿರುವನು
ಭೀಮನ ಸರಿಸದಲಿ !
ವೈರಿಯ ಎದೆಯನು
ಒಡೆಯುವ ಗದೆಯನು
ಮೇಲೆತ್ತಿರುವನು ನೋಡಲ್ಲಿ !
ಭೀಮನು ಬಿದ್ದನೆ !
ಕೌರವ ಗೆದ್ದನೆ !
ಮುಂದಾಗುವುದನು ಕಾಣಲ್ಲಿ !
ಇದಾವ ನ್ಯಾಯ !
ಏನನ್ಯಾಯ
ಕೃಷ್ಣನ ಕುಹಕವ ನೋಡಲ್ಲಿ !
ಏನನು ನೋಡುವೆ ? ತಡೆಯುವೆ ಏಕೆ ?
ಕೌರವರಾಯನು ಮಡಿಯಲೆ ಬೇಕೆ ?
ಯುವಕನೆ ತುಡುಕು ಕಠಾರಿಯನು !
ಹೊಡೆ ರಣಭೇರಿಯನು !
ನಡೆ, ನಡೆ, ಊದು ತುತೂರಿಯನು !
ಕರೆ, ರಣಮಾರಿಯನು !
ಕುಮಾರವ್ಯಾಸನು ಹಾಡಿದನೆಂದರೆ,
ಕಲಿಯುಗ ದ್ವಾಪರವಾಗುವುದು !

ಭಾರತ ಕಣ್ಣಲಿ ಕುಣಿವುದು ; ಮೆಯ್ಯಲಿ
ಮಿಂಚಿನ ಹೊಳೆ ತುಳುಕಾಡುವುದು !
ಕಲಿ ಕೆಚ್ಚಾಗುವನು !
ಕವಿ ಹುಚ್ಚಾಗುವನು.

ಕೆ. ವಿ. ಪುಟ್ಟಪ್ಪ

## ೩೦. ಕನ್ನಡ ನಾಡಿನ ಸ್ಥಿತಿಯನ್ನು ನೆನೆದು

ಹರಿದು ತುಂಡಾಗಿಹುದು ಇಂದು ಕನ್ನಡ ನಾಡು ;
ಅಣ್ಣತಮ್ಮದಿರು ತಾವಣ್ಣತಮ್ಮದಿರೆಂದು
ತಿಳಿಯಲಾರರು ನಡೆಯಲಾರರು ; ಬಾ ಬಂಧು
ಎಂದು ಕರೆಯಲು, ಸ್ವಾಮಿ ನಮ್ಮೂರು ಧಾರ್ವಾಡ
ನಮ್ಮೂರು ಮೈಸೂರು, ನಮ್ಮೂರು ಎರಕಾಡು
ಮರ್ಯಾದೆಯಿಂದ ಕರೆಯಿರಿ ನನ್ನ ಎನ್ನುವರು.
ಕನ್ನಡದ ನಾಡ ಜನವೆಲ್ಲವೂ ನನ್ನವರು,
ಬಡಗ ತೆಂಕಣ ಮೂಡ ಕೊಡಗ ತೌಳವ ತೋಡ
ಇನ್ನೆಲ್ಲ ಕನ್ನಡಿಗರೆನ್ನುವರು ಎನ್ನುಸಿರು,
ನಾವೆಲ್ಲ ಒಂದು ಮನೆಯವರಣ್ಣ ತಮ್ಮದಿರು,
ನಮ್ಮೆಲ್ಲರನು ಪಡೆದುದೊಂದೆ ನಾಡಿನ ಬಸಿರು,
ಎಂದು ನಾವರಿದೆವೇ ನಮಗೆ ಇನ್ನಾರೆದುರು !
ಹಾ ನನ್ನ ಸೋದರರೆ ಬನ್ನಿ ಒಂದಾಗಿ ;
ಜಯವಧುವ ನಿಮ್ಮ ತೋಳಿನೊಳಿಟ್ಟು ತೂಗಿ.

ಶ್ರೀನಿವಾಸ
(ಮಾಸ್ತಿ ವೆಂಕಟೇಶ ಅಯ್ಯಂಗಾರ್)

## ೩೧. ಎಂಥ ನಾಡಿದು

ಎಂಥ ನಾಡಿದು ಎಂಥ ಕಾಡಾಯಿತೋ!
ಹುಲುಸಾದ ಬೆಳೆಹೋಗಿ ಹುಲ್ಲುಕೊಳೆ ತುಂಬಿಹುದೋ!

ಹಗೆಯು ಹೆಸರನು ಕೇಳಿ ಹುಲಿಯಂತೆ ಹಸುಗೂಸು
ನೆಗೆದು ತೊಟ್ಟಿಲ ತುಳಿದು ಮೆಟ್ಟುತಿಹ ನಾಡಿನಲಿ
ಹಗೆಯ ಊಳಿಗಗೊಂಡು ನಾಯಿ ಬಾಳುಗಳೀಗ
ಬಗೆಬಗೆಯ ಬಾಯ್ತೆರದು ಹೇಡಿ ನುಡಿ ಬೊಗಳುತಹವೊ!

ನೂರು ರಾಜ್ಯವ ಕಟ್ಟಿ ಬಾನ ಛತ್ರವ ಹಿಡಿದು
'ಸಾರಿ ಬನ್ನಿರಿ ಸರುವ ಜನಮನವೆ ಮತಗಳೇ'
ಸಾರಿ ಈ ಪರಿ ಬಾಳ್ದ ಸೀಮೆಯಲಿ ಇದುವೀಗ
ಹರಿದು ಹಂಚುವ ಕಲಹ ಕುಲದೈವವಾಗಿಹುದೊ!

ಇಲ್ಲಿಯೇ ಈಸುವುದು ಇದ್ದು ಜೈಸುವುದೆಂಬ
ಎಲ್ಲರೊಡೆಯನ ನಂಬಿ ನಡೆವುದು ಎಂಬ ಆ
ಸೊಲ್ಲೀಗ ಗಾಳಿಯುಯ್ಯಾಲೆಯಲ್ಲಿ ತೂಗುತಿರೆ
ಒಲ್ಲೆ ಬಾಳನು ಎಂಬ ಗೋಳುಗಳು ಕೇಳುತಿಹವೊ

ನೆಲದ ಒಳ ಉರಿಯೆದ್ದು ತೂರಿರುವ ಮೊರಟಾದ
ಸಿಲೆಯ ಸಾವಿರದಿ ಗುಡಿ ಬಸದಿ ರಥ ಗೊಮ್ಮಟರ
ಚೆಲುವು ನನೆಕೊನೆಯಾಗಿ ಸಿಲ್ಲಿಸಿದ ನಾಡಿನಲಿ
ಚೆಲುವು, ಕಲೆ, ಹಾಡು ನುಡಿ ಹೂವುಗಳ ತುಳಿಯುತಿಹರೋ!

ಕಾಲಭೂತದ ಕಠಿಣ ಕತ್ತಲೆಯ ಸೆರೆಯಲ್ಲಿ
ಸಿಲುಕಿರುವ ಪುಲಿಕೇಶಿ ನೃಪತುಂಗ ಬಲ್ಲಾಳ ಹರಿಹರರೆ
ಇಲ್ಲಿಯೇ ಉಸಿರಾಡಿ ಈ ನಾಡು ಕಟ್ಟಿದಾ
ಎಲ್ಲರೇ ಮರಳುವುದು ನಿಮ್ಮ ಸಿರಿ ಸೂರೆಗೈಯೆ.

ರಂಗನಾಥ ಶ್ರೀನಿವಾಸ ಮುಗಳಿ

# ೩೨. ಹಂಪೆಗೆ

ನಿದ್ದೆ ಬಾರದು ಇನ್ನು ಈ ಜನ್ಮಕೆ
ಬಿದ್ದ ಹಂಪೆಯ ಕಂಡು ಕಂಗೆಟ್ಟೆನು

ಕನ್ನಡದ ತಾಯ್‌ಬೇರು ನೀರಡಿಸಿದೆ
ಹೊನ್ನು ಹೊಳೆ ಅದರ ಬಳಿ ತಾಳೊಣಗಿದೆ
ಚೆನ್ನು ಚೆಲುವಿನ ಹಂಪೆ ಹೆಳವಾಗಿದೆ.
ಎನ್ನ ತಾಯ್‌ಮನೆ ಥೇನು ಬರಡಾಗಿದೆ.

ತುಂಗಭದ್ರೆಯ ಕೂಸಿನುಸಿರಡಗಿದೆ
ಮಂಗಳದ ಆ ಹೆಸರು ಹದಗೆಟ್ಟಿದೆ
ಸಂಗಡಲೆ ಬನ್ನಿರೈ ! ಕನ್ನಡಿಗರೆ !
ಹಿಂಗದಿರೆ ! ಪ್ರೇಮದೊರೆ ಕನ್ನಡಿಗರೆ

ಶತಮಾನ ನಾಲ್ಕಾಯ್ತು ವಿಜಯನಗರಿ
ಅತಿನಿದ್ದೆ ಗತಿಹೊಂದಿ ಅಮರ ನಗರಿ
ಮತಿಯಿತ್ತು ಧೃತಿಯಿತ್ತು ಕನ್ನಡಿಗರೆ
ಗತಿಸಿರುವ ಕೀರ್ತಿಪದ ಗಳಿಸಿಕೊಳಿರಿ

ಗಾಯವನೆ ಮಾಡಿದನು ಮುಸಲಬಂಧು
ಕಾಯದಲೆ ಕೊಲ್ಲಿಸಿದ ಕನ್ನಡಿಗನೆಂದು
ತಾಯೆ ಈ ನುಡಿ ಸಲ್ಲ ! ಬಲ್ಲ ವಿಧಿಯು !
ಈ ಯುಗಕೆ ಅವರನ್ನು ಮನ್ನಿಸವ್ವ

ಭಿನ್ನ ಮೂರ್ತಿಗಳನ್ನು ನಿನ್ನಂಕದಲ್ಲಿ
ಇನ್ನೆಷ್ಟು ದಿನವಿಟ್ಟು ಗೋಳಾಡುವಿ ?
ಮುನ್ನಿನಾ ನೆನಹಿನಲಿ ಹೊನ್ನು ಹೊಳೆಯೆ
ಕನ್ನಡಿಗ ಹರಿಸುವನು ಕಣ್ಣೊರಸಿಕೊ.

**ಹೊಯಿಸಳ**
(ಎ. ಲಕ್ಷ್ಮಣರಾವ್)

# ೩೩. ಹಂಪೀ-ವಿಜಯನಗರ ದರ್ಶನ

ತಾಳವಿಲ್ಲದಲೆ ಬೇತಾಳನಂದದಿ ಕುಣಿವ
ಕಾಳ ನರ್ತಕನ ಕಾಲ್ಕೆಳಗೆ ತೊತ್ತುಳಿಗೊಂಡು
ಹಾಳಾಗಿ ಹುಡಿಗೂಡಿ ಹೋದ ಕನ್ನಡನಾಡಿ-
ಗಿದಿರಾಗಿ ಬಂದು ನಿಂತು

ಹಾಳುಗಳ ಹೊರವೊಳಗೆ ಹಾಳುಗಳ ಸಾಲುಗಳು
ಬೀಳುಗಳ ಬದಿಬದಿಗೆ ಬೀಳುಗಳ ಬಾಳುಗಳು
ಕಾಳ ರಕ್ಕಸನ ಕಡೆಕೊಳು-ಬಾಳಕವಾದ
ನಾಡ ನಡುಮನೆಯು ಕಂಡೆ.

ಕನಸೆನಲೊ, ಕಾಡುಪಾಲಾದ ಭೂಪಾಲಕನ
ಮನಸೆನಲೊ, ಮೋಡದೊಲು ಮೂಡಿ ಮಸುಳುವ ಚಿತ್ರ
ವೆನಲೊ, ಕಂಪಡಗಿ ಪೆಂಪುಡುಗಿ ಬಣ್ಣವು ಕೆಟ್ಟ
ನಿರ್ಮಾಲ್ಯ ಮಾಲೆಯೆನಲೊ ?

ನೆನಸಿ ಕೃತವರ್ಮ ಪಶ್ಚಾತ್ತಾಪದಿಂ ಬೆಂದು
ಜನಿಸಿ ಸುಜ್ಞಾನ, 'ಉದ್ಧಾರಮಾಡಿರಿ' ಎಂದು
ಮನಸಿನಿಂದೆರಗಿರುವನೆನಲೊ, ಪಾತಕಿ ಬಂದು
ಪಾವನನ ಚರಣಗಳಿಗೆ.

ಬಿದ್ದ ರಾಜ್ಯವಿದಲ್ಲ ಉದ್ಬುದ್ಧವಾಗಿದ್ದು
ಎದ್ದ ರಾಜ್ಯದ ಮೊಳಕೆಯಿದು, ಇದರ ಬಳಿಯಲ್ಲಿ
ಇದ್ದ ಸಂಜೀವನವ ಜಪಿಸುವಂತಹ ಯೋಗಿ
ಕೊಂಪೆ ಹಂಪೆಯು ಇದಲ್ಲ

ಬುದ್ಧಿಯೆಣಿಸಿತು, ಅಂತರಂಗದಧಿನಾಯಕನು
ಸುದ್ದಿಯನು ಸೂರುವೊಲು ಬುದ್ಧಿಯನು ಮೀರುವೊಲು
ಎದ್ದು ಹೇಳಿದನೊ ತಾ ಕನಕನೊಡೆಯನು ಪೇಳ್ದ
ಶುದ್ಧ ಮುಂಡಿಗೆಯಿದೆಂದು

ಕರ್ಮಯೋಗಿಯ ಬಳಿಗೆ ಯೋಗೀಶ್ವರನು ನಿಂದು
ಕರ್ಮದ ಅಕರ್ಮದೊಳಮರ್ಮಮಂ ತಿಳಿಸಿ ಸದ್-
ಧರ್ಮಮಂ ಸತತ ನಡೆಸಿದರೆ ಧ್ರುವವಿಜಯವೆಂ-
ದಂದು ತೋರಿಸಿದ ತೆರದಿ,

ಧರ್ಮಕರ್ಮದ ಪುರಾತನ ಪುರಗಳಿವು ಪೂರ್ವ
ಧರ್ಮ ಬಲದಿಂದೇರಿ ಕರ್ಮ ಬಲದಿಂದುಳಿದು
ಮರ್ಮದೊಳು ನೆಡುವಂತೆ ಸಪ್ರಯೋಗಿಕವಾಗಿ
ಕಲಿಸುವುವು ತತ್ವವೆಂದು.

**ದ. ರಾ. ಬೇಂದ್ರೆ**

## ೩೪. ಕನ್ನಡ ದಾಸಯ್ಯ

ಬೇಡಲು ಕನ್ನಡ ದಾಸಯ್ಯ ಬಂದಿಹ
ನೀಡಿರಮ್ಮಾ! ತಡಮಾಡದಲೇ ‖ ಪ ‖

ಹಾಡೊಂದನಾತನು ಹೊಸದಾಗಿ ಮಾಡಿಹ
ಕೂಡಿರಿ ಕೇಳಿರಿ ಹಾಡುವನು ‖ ಅನು ‖

ಕನ್ನಡ ಮಾತಿನ ತಂದೆತಾಯಿಗಳಿಂದ
ಚೆನ್ನ ಚೆನ್ನೆಯರೆಲ್ಲ ಹುಟ್ಟಿದಿರಿ.
ಕನ್ನಡ ಮಾತಿನ ಜೋಗುಳವನು ಕೇಳಿ
ಕನ್ನಡ ತೊಟ್ಟಲೊಳಾಡಿದಿರಿ.

ಕನ್ನಡ ದೇಶದೆ ದೊಡ್ಡವರಾದಿರಿ
ಕನ್ನಡ ವಿದ್ಯೆಯ ಗಳಿಸಿದಿರಿ
ಕನ್ನಡದಿಂದಲೆ ಸಿರಿವಂತರಾದಿರಿ
ಕನ್ನಡ ದೇಶದೆ ಹೆಸರಾದಿರಿ.

ಅನ್ಯ ಭಾಷೆಗಳಂತೆ ಕನ್ನಡ ಭಾಷೆಗೆ
ಉನ್ನತಿಕೆಯ ತರಬೇಕೆಂದು
ಹೊನ್ನು ಕೂಡಿಸಲಿಕ್ಕೆ ಬಂದಿಹನಾತನು
ಮನ್ನಿಸಿ ಹಣವನು ಕೊಡಿರಮ್ಮ.

ಹೊಟ್ಟೆಗಿಲ್ಲದೆ ಬಂದ ದಾಸಯ್ಯನಿವನಲ್ಲ
ಕೊಟ್ಟುದ ಬಿಟ್ಟು ಹೋಗುವನಲ್ಲವು
ದಿಟ್ಟಿಸಿ ದಿಟ್ಟಿಸಿ ಕೊಡಬಂದ ಕೈಗಳ
ನೊಟ್ಟುಗೂಡಿಸಿ ಪದ ಕಟ್ಟುವನು.

ಚಿನ್ನದ ಕಡಗದ ಕೈ ಕಾಸನಿತ್ತಿತು
ರನ್ನದುಂಗುರದ ಕೈ ಇಲ್ಲೆಂದಿತು
ಹೊನ್ನ ವಂಕಿಯು ಕೈ ಸುಮ್ಮನೆ ಕುಳಿತಿತು
ಇನ್ನೊಂದು ಬಳೆಗೈ ಹಣ ಕೊಟ್ಟಿತು.

ಕೊಟ್ಟರೆ ಹಿಗ್ಗುವ ಕೊಡದಿರೆ ಕುಗ್ಗುವ
ಕೆಟ್ಟ ಮನದ ಗುರುತಿವಗಿಲ್ಲವು
ಕೊಟ್ಟ ಕಾಸುಗಳೆಲ್ಲ ಹೆಡಿಗೆ ತುಂಬುವ ಹೊನ್ನು
ಇಟ್ಟಂಥ ನಿಧಿ ಕೊಡದಿಹ ದ್ರವ್ಯವು.

ಕಾಸಿಗಲ್ಲವು ನಿಮ್ಮ ಸೋಸಿಗೆ ಬೆಲೆಯಿದೆ
ಕಾಸಲ್ಲವೇ ಕೋಟಿಯ ಮೂಲವು
ಈ ಶಾಸ್ತ್ರವ ಶಾಂತವಿಠ್ಠಲನೋಳ್ ಕಲಿತನು
ಸಾಸಿರವಿದರಂತೆ ತಂದಿಹನು.

ಶಾಂತಕವಿ

## ೩೫. ತರುಣರ ದಸರೆ

ಹೆಜ್ಜೆಯ ಹಾಕುತ ಬನ್ನಿರಿ ಮುಂದೆ
ನೋಡಲು ದಸರೆಯ ಹಬ್ಬವನು
ಉತ್ಸಾಹದ ಕಿರುಗೆಜ್ಜೆಯ ಕಟ್ಟಿ
ಹಾಡಿರಿ ನಾಡಿನ ಕಬ್ಬವನು.
ಹಬ್ಬದೊಳೆಲ್ಲಾ ದಸರೆಯ ಹಬ್ಬ ;
ಕಬ್ಬಗಳೆಲ್ಲಾ ರನ್ನನ ಕಬ್ಬ ;
ತಿಂಡಿಗಳೆಲ್ಲಾ ಬೂಂದಿಯ ಲಾಡು,
ಧರೆಯೊಳಗೆಲ್ಲಾ ಕನ್ನಡನಾಡು,
ನಾಡಿನ ಹಾಡನು ಹಾಡುತ ಬನ್ನಿ !
ದಸರೆಯ ಹಬ್ಬವ ನೋಡಲು ತನ್ನಿ !
ಮೋಡಗಳೆಲ್ಲವು ಸರಿದುವು ಹಿಂದೆ
ಆಗಸವೆಲ್ಲಾ ಬಿಳುಪಾಯ್ತು.

ಚಳಿಗಾಲೆಂಬೋ ಸಗ್ಗದ ಅಗಸ
ಗಗನವ ತೊಳೆದನು ! ನೆನಪಾಯ್ತು !
ಬೆಳಕೇ ಇಲ್ಲದ ಮಳೆಗಾಲ
ಹಿಂದಕೆ ಸರಿಯಿತು ಆ ಕಾಲ
ಮೂಡಿದೆ ಬೆಳಕಿನ ಚಳಿಗಾಲ
ಜ್ಞಾನವ ಬೀರುವ ನವಕಾಲ
'ಮುಗಿಲಿನ ಮಳೆ ಮುಗಿಯಿತು' ಅನ್ನಿ
ನಗುಮಳೆಯನು ಸುರಿಯುತ ಬನ್ನಿ !
'ಸೀಮೋಲ್ಲಂಘನ' ಮಾಡಿರಿ ಇಂದು
ಭೀತಿಯ ಸೀಮೆಯ ದಾಟುತಲಿ,
ಧೈರ್ಯಧ್ವಜವನು ಮೆರೆಸುತ ಮುಂದು
ನಡೆಯಿರಿ ನೀತಿಯ ನಾಡಿನಲಿ,
ಧರ್ಮದ ಗಡಿಯನು ದಾಟಲು ಬೇಡಿ
ಕರ್ಮದ ಕೋಲನು ಬಿಡದಲೆ ಓಡಿ,
ಮರ್ಮವ ತಿಳಿದೆಲ್ಲರು ಹಾರಾಡಿ
ಚರ್ಮದ ದೇಹದ ಸಾರ್ಥಕ ಮಾಡಿ,
'ಬನ್ನಿಯ ಗಿಡ ಬಂದಿತು' ಅನ್ನಿ
ಚಿಣ್ಣರೆ ನೀವೆಲ್ಲರು ತನ್ನಿ.
'ಹಿಂದಿನ ಕಾಲವು ಹಿಂದಕೆ' ಅನ್ನಿ,
ಮುಂದಿನ ಕಾಲವು ನಮ್ಮುಂದೆ,
ನಾಡಿನ ಯುವಕರೆ, ಮುಂದಕೆ ಬನ್ನಿ
ಮುದುಕರು ನಿಲ್ಲಲಿ ಹಿಂದ್ ಹಿಂದೆ,
ಹೊಸ ಹೊಸ ಮತಗಳ ಬಗೆಬಗೆ ಹುರುಪಿನ
ಚೆನ್ನ ಚಟಾಕಿಯ ಹಾರಿಸುವ
ಕೆಂಪಿನ ವರ್ಣದ ಕೆಚ್ಚೆದೆ ಬಣ್ಣದ
ಕಿಡಿಗಳನವರಿಗೆ ತೋರಿಸುವ.
ಮುದುಕರು ನಿಲ್ಲಲಿ ತುಸು ಹಿಂದೆ
ಹುಡುಗರ ಸಾಹಸ ಏನೆಂಬೆ !
ಮುದುಕರು ಪಾಪ ! ಕಂಗಳು ಮಂದ
ಮುಂದಿನ ನೋಟವ ನೋಡಲು ಅಂಧ,
ಹೊಸ ಹೊಸ ರೀತಿಯ ದೂರುವರು
ಹಳೆಯ ಪುರಾಣವ ಹೇಳುವರು.

ಅಂಥ ಭಕ್ತಿಗೆ ಉರಿಯನು ಒಡ್ಡಿ!
ನಿಲ್ಲಿರಿ ಎಲ್ಲರು ಗೋಲಾಗಿ,
ಚಂದದಿಂದ ಚಪ್ಪಾಳೆಯು ತಟ್ಟುತ
ಮುಂದೆ ನಡೆಯಿರಿ ಸಾಲಾಗಿ ;
ದೊಡ್ಡ ಮನಸಿನ ಕುದುರೆಯ ಹತ್ತಿ,
ಕೈಯಲಿ ಹಿಡಿಯಿರಿ ಧೈರ್ಯದ ಕತ್ತಿ ;
ಹಿಂದು ಧರ್ಮಧಾ ಪೇಠಾ ಸುತ್ತಿ
'ಆತ್ಮಸಂಯಮನ '-ಲಗಾಮು ಜಗ್ಗಿ,
ದುಗುಡವ ಬಗ್ಗಿಸಿ, ಹಿರಿ ಹಿರಿ ಹಿಗ್ಗಿ,
ಎಲ್ಲ ಜಾತಿಗಳ ಗುಂಪನು ನುಗ್ಗಿ,
ಭೇದವನೊಡೆಯಿರಿ ತಲೆಯನು ಬಗ್ಗಿ ;
ಆಗ ನಲಿಯುವುದು ಸಂತಸ ಸುಗ್ಗಿ
ಭಾರತಭೂಮಿಯ ಅಬಲತೆ ಕುಗ್ಗಿ.
ಅಂದು ಮೂಡವನು ದಸರೆಯ ಅರುಣ
ಅಜ್ಞಾನದ ಕತ್ತಲೆಗದು ಮರಣ.
ಮಾನವ ಧರ್ಮದ ದಸರೆಯ ಮಾಡಿ
ಕನ್ನಡನಾಡಿನ ಹಾಡನು ಹಾಡಿ.

ದಿನಕರ ದೇಸಾಯಿ

## ೩೬. ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ

೧

ಕಾಯಿ, ತಾಯಿ, ಕೃಪೆಯ ತೋರಿ
ನಮ್ಮ ಕೃಷ್ಣನ
ಬೆಳ್ಳಿಬೆಟ್ಟದೊಡತಿ ಗೌರಿ,:
ಬೆಳ್ಳಿಯೊಸಗೆಗೊಸಗೆ ಬೀರಿ
ಕಾಯಿ ಕೃಷ್ಣನ.

ಏಳು, ವಾಣಿ, ವೀಣೆದಾಳು,
ಅಮೃತವಾಣಿಯಿಂದ ಹೇಳು
ಪುಣ್ಯದರಸು, ಧರ್ಮದಾಳು,
ದೊರೆಯು ಕೃಷ್ಣನ.
ಹೊನ್ನು ನಡೆಯು, ಹೊನ್ನು ನುಡಿಯು,
ಕನ್ನಡಿಗರ ವಯಿರಮುಡಿಯು,
ಒಡೆಯು ಕೃಷ್ಣನ.

೨

ಏನು ಲಲಿತಾದ್ರಿಯಲಿ ಬೆಳಕುಗಳುಷೆಗೆ ಕಾಂತಿಯನೀವುವು!
ಮೇಲಕೇರುವ ಬೆಳಕದಾವುದು ? ಇಳಿವ ಬೆಳಕುಗಳಾವುವು ?
ಆವ ದೇವಿಯರಿವರು ಮೂವರು ?—ಕನ್ನಡದ ಸಿರಿಯೊಬ್ಬಳು.
ಅಕ್ಕತಂಗಿಯರಂತೆ ತಬ್ಬುತ, ಕಡಲ ರಾಣಿಯದೊಬ್ಬಳು,
ಶ್ರೀ ಭರತಮಾತೆಯದೊಬ್ಬಳು :
ತನ್ನ ಮಕ್ಕಳ ಬೀರಗನಸುಗಳುಬ್ಬುತಿರೆ ನಸುನಗುವಳು ;
ಭರತಮಾತೆ! ಪ್ರೇಮಮಾತೆ!
ಮಹಿಮೆಯಲಿ ಕಳೆ ಮಿಗುವಳು.
ಗೌರಿಯೋಲಗದಿಂದ ಬಂದಳು, ಪೂರ್ಣಕುಂಭವ ತಂದಳು ;
ದೂರ ವಿನಯದಿ ನಿಂದ ಕನ್ನಡ ಹೆಣ್ಣ ಬಳಿಯಲಿ ನಿಂದಳು ;
ಕಳಶವಿತ್ತಿಂತೆಂದಳು—
" ಬಾಳು, ಕನ್ನಡದರಸಿ, ಗೌರಿಯು ಕೃಪೆಯ ಸುಧೆಯನು ಚೆಲ್ಲಿಸು.
ಕೃಷ್ಣರಾಜನ ಕೀರ್ತಿ ಹಬ್ಬಿದ ಚೆಲುವು ನಾಡನು ಗೆಲ್ಲಿಸು.
ಕೃಷ್ಣರಾಜನ ಸಿರಿಯು ಮುಡಿಯಲಿ ಸಕಲ ಭಾಗ್ಯವ ಸಲ್ಲಿಸು.
ತನ್ನ ಬಾಳನು ನಾಡ ಮೇಲ್ಮೆಗೆ ಮುಡಿಪು ಕಟ್ಟಿದ ಧೀರನು.
ತನ್ನ ಗುರಿಯನು ಬಿಡದೆ ಕೊಳುವನು, ಆತ್ಮಗುಣದಲಿ ವೀರನು.
ಹೋಗು ಸೊಬಗಿಯೆ, ಬಾಳು "—ಎಂದಳು.
ಬಳಿಯ ಕೆಳದಿಯ ಕೈಯ ಕೊಂಡಳು ;
ಮುಗಿಲ ಮರೆಯಲಿ ಸಂದಳು.

೩

ಮಂಗಳ ಮಸುಗಿತು ಮೈಸೂರರಮನೆ ; ಸಿಂಗರವಾಯಿತು ಮೈಸೂರು,
ಕೃಷ್ಣನ ವೈಭವವೆಲ್ಲವ ತೋರುವ, ಸಾರುವ ಮೀರುವ ಮೈಸೂರು,
ನಾಲ್ಮಡಿ ಕೃಷ್ಣನ ಮೈಸೂರು.

ಬೆಟ್ಟವೊ, ಕೆರೆಯೋ, ಬೀದಿಯೊ, ಬನವೋ. ಮನೆಯೋ, ಮಹಲೋ, ಎಲ್ಲೆಲ್ಲು,
ದಟ್ಟಿಗೆ ಕೂಡುವ, ಭಕ್ತಿಯನಾಡುವ, ಹರ್ಷವ ತೋಡುವ ಸವಿಸೊಲ್ಲು,
ನಾಲ್ಮಡಿ ಕೃಷ್ಣನ ಸವಿ ಸೊಲ್ಲು,

ಎಳೆಯರು ನಾಡಿನ ಬೆಳೆಸಿರಿವೊಳೆಗಳು, ಆಡಿ, ಪಾಡಿ, ಕುಣಿಕುಣಿದಾಡಿ,
ಓದುವ ಹೆಣ್ಗಳು ಗಂಡುಗಳುಲಿವರು, ಸಸಿಯನು ನೆಡುವರು, ಕೊಂಡಾಡಿ,
ನಾಲ್ಮಡಿ ಕೃಷ್ಣನ ಕೊಂಡಾಡಿ

ಅರಿವನು ಹರಡುವ, ಸಿರಿಯನು ಬೆಳಸುವ, ಪರಿಪರಿ ಕೃಷಿಯನು ರೂಢಿಸುವ,
ತನ್ನೊಂದೊಲುಮೆಗೆ ಮರುಗಿಸಿ ಹಲ ಬಗೆ ನಾಡಿಗರೊಂದೆನೆ ಕೂಡಿಸುವ,
ಆಡುವ, ಹಾಡುವ, ಬರೆಯುವ, ಕೊರೆಯುವ ಕಟ್ಟುವ ಕಳೆಗಳ ಹೂಡಿಸುವ,
ಹೊಸ ಹೊಸ ತೆರದಲಿ ಮನುವನು ಮುಟ್ಟುವ ಕವಿಗಳಿಗುತ್ಸವ ಮಾಡಿಸುವ,
ಪ್ರೇಮದ ಸ್ವಾಮಿಗೆ, ಕೃಷ್ಣಗೆ ಹಿರಿಯರು ಬಿನ್ನಹಗೈವರು ತಲೆಬಾಗಿ,
ನೆಚ್ಚಿನ ಮೆಚ್ಚಿನ ಬಿನ್ನಹ ಕರಗಿಸೆ, ಹೃದಯವನೆರೆವನು ಮುಡಿಪಾಗಿ,
ನಾಲ್ಮಡಿ ಕೃಷ್ಣನ ಮುಡಿಪಾಗಿ.

ಕನ್ನಡ ದೇವಿಯ ಬಯಕೆಯ ಕಳಶದ ಸುಧೆ ಸುರಿದೆತ್ತಲು ಚೆನ್ನಾಯ್ತು;
ಪ್ರೇಮದ ಸ್ವಾಮಿಯ ಕೃಷ್ಣನ ಭಕ್ತಿಯ ರಸ ಹರಿದೆತ್ತಲು ಹೊನ್ನಾಯ್ತು.
ಮಂಗಳಮಯವಾಯಿತು ನಾಡು;
ಸಿಂಗರದಾ ಕನ್ನಡನಾಡು.

ಪಡುಗಡಲಿನ ತೆರೆ ಮುದ್ದಾಡುವ ಕರೆ, ಹೊಳೆ ಹಾಲಿಳಿಯುವ ಘಟ್ಟದೆರೆ,
ಪಂಪನ ರನ್ನನ ಪುಟವಿಡಿಸಿದ ಕಡೆ, ಹಂಪೆಯು ತಾಂಡವವಾಡಿದೆಡೆ,
ಹೊಯ್ಸಳರೆತ್ತಲು ಕಡೆಯಿಸಿ ನಿಲಿಸಿದ ಗುಡಿಗಳ ಸೊಬಗಿನ ಕಣ್ಣ ಸೆಳೆ,
ಜಲಜಲನುಕ್ಕುವ ಕಾಲುವೆ ಬಯಲಲಿ ಪಚ್ಚೆಯ ಪಯಿರಿನ ತುಂಬು ಬೆಳೆ—
ಮಂಗಳಮಯ ತಾನೆತ್ತಲು ನಾಡು,
ಸಿಂಗರದಾ ಸಿರಿಗನ್ನಡನಾಡು.

ಅತ್ತಲು, ತಾನೆತ್ತೆತ್ತಲು, ಒಮ್ಮನ, ಒಕ್ಕೊರಲಾಗುತ ಜನ ಕೂಡಿ,
ನಿರ್ಮಲ ಚಿತ್ತನ, ಪುಣ್ಯ ಚರಿತ್ರನ, ಕೃಷ್ಣನ ಹರಸುತ ಜನ ಹಾಡಿ,
ಜಯ ಜಯ ಎಂಬರು, ಜೆಳೆ ಬಾಳೆಂಬರು,
ನಿನ್ನದು ಕನ್ನಡದೆದೆಯೊಲವೆಂಬರು—

ಮಂಗಳ ಮಸಗಿತು ಮೈಸೂರರಮನೆ; ಧನ್ಯತೆ ಪಡೆಯಿತು ಮೈಸೂರು,
ಕನ್ನಡನಾಡಿನ ಮನ್ನಣೆ ಪಡೆಯಿತು ನಾಲ್ಮಡಿ ಕೃಷ್ಣನ ಮೈಸೂರು.

೪

ಎಂತೆನ್ನ ಬಗೆ ಹಾರುವುದು ನೆಗೆದು ಸಂದು
ಮೈಸೂರ ಮೊತ್ತಮೊದಲೊಸಗೆ ಬೆಳೆದಂದು !
ಸೆರೆಯಿಟ್ಟು ಕಾಡಿದಾ ಖೂಳನನು ಕೊಂದು,
ಅರಸರರಸಿಯರೆಲ್ಲ ಹರಸುತಿರೆ, ಬಂದು,
ಕೈ ಹಿಡಿದ ರಾಣಿಯನು ನಗುತ ಕರೆತಂದು,
ಮುದ್ದಾದ ಮೈಸೂರ ತಾವರೆಯ ತಂದು,
ದೇವಿ ಚಾಮುಂಡಾಂಬೆಯೆದುರಿನಲಿ ನಿಂದು,
ಕೈಮುಗಿದು ಬೇಡಿದನು ಯದುರಾಯನಂದು :
"ಕಾಯಿ, ತಾಯಿ, ಕೃಪೆಯ ತೋರಿ,
ನಿನ್ನ ಮಗನನು ;
ನಲುಗಿ, ನಿನ್ನ ನೆರಳ ಸೇರಿ
ನಲಿವ ಹೆಣ್ಣನು.
ಧರ್ಮದೊಲವ ನಮಗೆ ನೀಡು,
ಸತ್ಯ ನಿಲಿಸುವಂತೆ ಮಾಡು,
ಹಿರಿಯ ಮೈತ್ರಿಗಳನು ಕೂಡು,
ಕರಣದಿಂದ ಬಿಡದೆ ನೋಡು,
ಕಾಯಿ, ತಾಯಿ, ನಮ್ಮ ನಾಡು,
ನಮ್ಮ ಮನೆಯನು,
ನಡಸಿ. ಬೆಳಸಿ, ಹಿರಿದುಮಾಡು,
ನಮ್ಮ ಮನೆಯನು."

೫

ಇಂತೆಂದು ಬೇಡಿದನು ಮೈಸೂರ ಮನೆತನದ ಮೊದಲಿಗನು ಬಾಗಿ,
ಮನಮುಳುಗಿ ಭಕ್ತಿಯಲಿ. ಚಿತ್ರದಾಳುಗಳಂತೆ ನಿಶ್ಶಬ್ದವಾಗಿ,
ಮೂಡುವಚ್ಚರಿ ಹದವ ಹಾರುತ್ತ, ಸಭೆಯೆಲ್ಲ, ಎದೆ ಹೊಯ್ಯುದಲ್ಲಿ
ನಿಂದಿಹುದು. ಅಹ! ಅಲುಗಿತಭಯಹಸ್ತದ ಹೂವು; ಸಿಡಿದು ಮುಡಿಯಲ್ಲಿ
ನೆಲಸಿದುದು, ಯದುರಾಯ ಮಕುಟದಲಿ ದೇವಿಕೆರೆ ಸಂಪಗೆಯದೊಂದು.
ಕೂಗಿದಳು ನೆರವಿಯಲಿ ಮುತ್ತೈದೆ, ಬೆದರಿದಳು ಮೈಮೇಲೆ ಗುಂಪಿನಲಿ ಬಂದು,
ಕೆದರಿದಳು ಬಿರಿದಲೆಯ ನರೆನವಿರ, ಬಿರುಬಿರನೆ ಕಣ್ತೆರುಹಿ, ನಕ್ಕು,
ಕದಡುಬಗೆ ತಿಳಿಯಾಗಿ, ದೂರದೆಸೆ ಬಳಿಯಾಗಿ, ಮುಂದಹುದ ಹೊಕ್ಕು,
ನುಡಿದಳವಳೆಂದು—

ಹಣ್ಮುದುಕಿ ನೋಟವನು ನುಡಿದಳವಳೆಂದು
ಗಿರಿಯ ನೆತ್ತಿಯ ಮೇಲೆ ಗಂಭೀರ ಘೋಷದಲಿ ಗುಂಪಿಸಲಿ ಬಂದು
ಮಳೆ ಕುಡಿವ ಹಕ್ಕಿವೊಲು ಕುಡಿಯುತಿರೆ ಕನ್ನಡದ ಕಲಿಗಳಾ ಸಿರಿಯು,
ಪಾವನದ ಮುತ್ತೈದೆ ಸವಿಗರೆದು ನುಡಿದಳಾ ಮೈಸೂರ ಸಿರಿಯು,
ಕನ್ನಡದ ನಾಡ ಸಿರಿಯು.

೬

"ಮೆಚ್ಚಿದನು, ಮೆಚ್ಚಿದೆನು, ವಿನಯನಿಧಿ; ನನ್ನೊಲುಮೆಗುವರಿ, ಈ ಅರಸಿ,
ಚಿಕ್ಕದೇವಾಂಬೆಯನು ದುಃಖವಾವರಿಸುತಿರೆ, ಅದ ನಿನ್ನ ಕರಸಿ,
ಪರಿಹರಿಸಿ, ರಾಜ್ಯವನು ನಿನ್ನ ತೋಳಿನೊಳಿರಿಸಿ ಕಾಯುವೆನು, ಬಾಳು.
ಕೃಷ್ಣದೇವನ ಕುಲದ ನೆಲದರಿಕೆಯಾಳಿಕೆಯ ಹೆಮ್ಮೆಯಿಂದಾಳು.
ನಿನ್ನ ಮಕ್ಕಳ ಸಾಲು ಕುಡಿಯೊಡೆದು ಹಬ್ಬುವುದು, ಬೆಳಗುವುದು, ಬೀಡು;
ಕಡೆಗಾಣದಂತೆಂತು ನಿಮಿರುವುದು ಯಾದವರ ಸಂತಾನ, ನೋಡು;
ಕರ್ಣಾಟ ಚಕ್ರವರ್ತಿಗಳು, ಹೊಳೆಹೊಳೆಯುತಿಹರೆಂತು ಹೆಸರಾಂತು !
ರಾಜೊಡೆಯ, ನರಸಿಂಹ, ಚಿಕದೇವ, ಮುಮ್ಮಡಿ ಸು ಕೃಷ್ಣೇಂದ್ರನಿಂತು,
ಹೊಸಯುಗದ ಚಾಮೇಂದ್ರ–ಹಿರಿಯರೆಲ್ಲರ ಪುಣ್ಯ ಫಲಿಸಿ ಬಂದಂತೆ,
ನಿರ್ಮಲವ ಗಗನದಲಿ ನೆಲಸಿ ಶಾಂತಿಯೊಳಿರುವ ಚಂದ್ರನೆಂಬಂತೆ,
ನಾಲ್ಮಡಿಯ ಶ್ರೀ ಕೃಷ್ಣ–ಶ್ರೀಕೃಷ್ಣ–ಸಾಕೆನಿತು ಮಾತಿನಿತು ಸಾಕು.
ಪರಮತೇಜಸ್ವಿಗಳು, ರಣಧೀರರಪ್ರತಿಮವೀರರಾಗಿದ್ದು,
ಚಕ್ರವನು ತಡೆಯಿಲ್ಲದೋಡಿಸುತ, ಆಡುತ್ತ, ದುರ್ಗಗಳ ಗೆದ್ದು,
ಯುದ್ಧಕಾನಂದಿಸರು; ಕತ್ತಿಹೊಳಪನು ಚಿನ್ನದೊರೆಯೊಳಗೆ ಮರಸಿ,
ತೊಡವೆನಿಸಿ ಮುಡಗಿಹರು, ಶಾಂತಿಯಲಿ ಮನಸೋತು ಸಾತ್ವಿಕವನರಸಿ-
ಸೌಮ್ಯಮೂರ್ತಿಗಳವರು, ಸಾಧುಗಳು, ಪ್ರೇಮಿಗಳು, ಭಕ್ತಿಬೋಧಕರು,
ಕಾವ್ಯರಸಿಕರು, ಗಾನ ಕೌಶಲರು, ಕಲ್ಯಾಣಕಾರ್ಯಸಾಧಕರು.
ಗುರುಗಳನು ಹಲವರನು ಸೇವಿಸುತ, ಧರ್ಮಸಾರವನು ಕಡೆಯುವರು,
ಸ್ವಾಮಿಭಕ್ತಿಯೊಳೆರಡನೆಣಿಸದೆಯೆ ತಮ್ಮೊಡೆಯತನವ ನಡೆಯುವರು.
ಬ್ರಹ್ಮದಲಿ, ಕ್ಷಾತ್ರದಲಿ, ನೀತಿಯಲಿ, ನೆರೆ ಪಳಗಿ ಮೈಮೆವೆತ್ತಿಹರು.
ಒಮ್ಮೆ ನಾಡನು ತಿರುಗಿ ಹಳ್ಳಿಗಳ ನೆಮ್ಮದಿಯನೇರ್ಪಡಿಸುತಿಹರು.
ಒಮ್ಮೆ ಹೊಳಲನು ಮರೆದು ಮಿತ್ರರಾಜರ ಬರಿಸಿ ಸುಖಗೊಳಿಸುತಿಹರು.
ಹೊಳೆಗಳನು ತಡೆಗಟ್ಟಿ ಬೆಂದ ಕಾಡನು ಬೆಳಸಿ ಹಸುರೆರಚುತಿಹರು.
ಬೆಟ್ಟದಲಿ ವಿಹರಿಸುತ ಜಾತ್ರೆಗಳ ಸಂಭ್ರಮಕೆ ಸಡಗರಿಸುತಿಹರು.

ಜ್ಞಾನಿಗಳ ಗೋಷ್ಠಿಯಲಿ ಕೇಳುವರು, ಬರಸುವರು, ತಾವೆ ಬರೆಯುವರು.
ಪ್ರಜೆಗಳೊಲುಮೆಯ ಸೆಳೆದು. ರಾಜರಲಿ ಗಣ್ಯತೆಯ ಪಡೆದು ಮೆರೆಯುವರು.

ಮೈಸೂರರಸರ ಮೊದಲಿಗ, ನೋಡು,
ಇಂತಹ ದೊರೆಗಳ ಸೇರಿದ ನಾಡು,
ಸಿಂಗರದಾ ಸಿರಿಗನ್ನಡನಾಡು,
ಮಂಗಳಮ್ಮಯದಾ ನನ್ನೀನಾಡು,
ಕಂದದು, ಕುಂದದು, ಕೊರಗದು, ನೋಡು,
ಮೈಸೂರರಸರ ಅರಮನೆ ನೋಡು
ಉರಿ ಕೊಳೆ ಸಗ್ಗದೆ ಶಿಲೆಯಲಿ ಬೀಡು
ಉರಿಯನೆ ಹೊದೆಯುತ ನಗುವುದು ನೋಡು,
ಹೊಳೆವುದು, ಸೆಳೆವುದು, ನೋಡು,
ಸುಖದಲಿ ನೆರೆದಾ ಜನವನು ನೋಡು
ನಾಲ್ಮಡಿ ಕೃಷ್ಣನ ಹರಸುವರು ;
ಆತನ ಸುಖದಲಿ ಬೆರಸುವರು ;
ಇಂತಹ ಜನವನು, ನಾಡನು, ದೊರೆಯನು
ನಾನೆಂದೆಂದೂ ಹರಸುವೆನು,
ನಾನೆಂದೂ ಕಾಯುವೆನು,
ಕಾಯುವೆನು."

೭

ಕಾಯಿ, ತಾಯಿ, ಗೌರಿದೇವಿ, ಕೃಷ್ಣರಾಜನ !
ಬೆಳ್ಳಿಬೆಟ್ಟದೊಡತಿ, ಗೌರಿ
ಬೆಳ್ಳಿಯೊಸಗೆಗೊಸಗೆ ಬೀರಿ
ಕಾಯಿ ಕೃಷ್ಣನ.
ಕನ್ನಡಿಗರ ವಯಿರಮುಡಿಯ ರಾಯಕೃಷ್ಣನ !

ಶ್ರೀ

## ೩೭. ಕನಸಿನೊಳಗೊಂದು ಕಣಸು

' ಯಾರು ನಿಂದವರಲ್ಲಿ ತಾಯೆ ! ' ಎಂದೆ !
' ಯಾರು ಕೇಳುವರನಗೆ ಯಾಕೆ ತಂದೆ ? '

‘ ಬೇಸರದ ದನಿಯೇಕೆ ಹೆಸರ ಹೇಳಲ್ಲ.’
‘ ಹೆಸರಾಗಿಯೂ ಕೂಡ, ಹೇಳಹೆಸರಿಲ್ಲ.’
‘ ನೀನಾರ ಮನೆಯುವಳೊ ಮುತ್ತೈದೆ ಹೇಳು.’
‘ ನಾನಾರ ಮನೆಯುವಳೊ ಬಯಲನ್ನೆ ಕೇಳು.’
‘ ಆಪ್ತರಿಲ್ಲವೆ ನಿನಗೆ ಇಷ್ಟರಿಲ್ಲೇ!’
‘ ಗುಪ್ತರಾದರೊ ಏನೊ ಇಷ್ಟರಲ್ಲೇ!’
‘ ಇರುವರೇ ಇದ್ದರೇ ಮಕ್ಕಳೆಂಬವರು ?’
‘ ಇರುವರೆಂದರು ಕೂಡ ಯಾರು ನಂಬುವರು ?’
‘ ಮನೆಯಿಲ್ಲವೇ ಇರಲು, ಪರದೇಶಿಯೇನು ?’
‘ ಮನೆಯೆ ಮುನಿದೆದ್ದಿರಲು ಯಾ ದೇಶವೇನು ?’
‘ ನಿನ್ನ ಮಾತಿನಲಿಹುದು ಒಡಪಿನಂದ.’
‘ ನನ್ನ ಹತ್ತಿರದೊಂದೆ ಉಳಿದಿಹುದು ಕಂದ.’
‘ ರಾಜಮುಖಿ ನಿನ್ನಲ್ಲಿ ರಾಜಕಳೆಯಿಹುದು.’
‘ ಸಾಜಮಾದರು ಪಕ್ಷವಿದು ವದ್ಯವಹುದು.’
‘ ಯಾವುದಾದರು ನಾಡದೇವಿಯೇ ನೀನು ?’
‘ ಭಾವುಕರ ಕಂಗಳಿಗೆ ದೇವಿಯೇ ನಾನು.’
‘ ಈಗ ಬಂದಿಹುದೇಕೆ ಏನು ಬೆಸನ ?’
‘ ಯೋಗವಿಲ್ಲದೆ ತಿಳಿಯದೆನ್ನ ವೆಸನ !’
‘ ಹಾದಿ ಯಾವುದು ಹೇಳು ಯಾವ ಯೋಗ ?’
‘ ಆದಿ ಅಂತವು ಇಲ್ಲದಂಥ ತ್ಯಾಗ !’
‘ ಬೇಡ ಬಂದಿಹೆ ಏನು ಏನಾದರೊಂದು ?’
‘ ಬೇಡಿದರೆ ಬೇಡಿದುದ ಕೊಡುವೆಯಾ ಇಂದು ?’
‘ ಅಹುದು ಕೊಡುವೆನು ಎಂದು ನಾನೆನ್ನಬಹುದೇ ?’
‘ ಬಹುದುಗಿಹುದಿನ ಶಂಕೆ ವೀರನಹುದೇ ?’
‘ ಹಿಂಜರಿವ ಅಂಜಿಕೆಯು ಹಿಡಿದಿಹುದು ಕೈಯ.’
‘ ಮುಂಜರಿವ ಹುರುಪಿನೊಡೆ ಮುಂದೆ ಬಾರಯ್ಯ.’
‘ ಇಲ್ಲೆನ್ನಲಾರೆ ನಾನಹುದೆನ್ನಲಮ್ಮೆ.’
‘ ಬಲ್ಲವರು ದೈವವನು ಪರಕಿಸುವರೊಮ್ಮೆ.’
‘ ಚಂಡಿ ಚಾಮುಂಡಿ ಪೇಳ್ ಬೇಕಾದುದೇನು ?’
‘ ಗಂಡುಸಾದರೆ ನಿನ್ನ ಬಲಿಕೊಡುವೆಯೇನು ?’

* * * *

ಮನವು ನಡುಗಿತು ತನುವು ನವಿರಿಗೊಳಗಾಯ್ತು ;
ನೆನವು ನುಗ್ಗಿತು–ಹೊರಗೆ ಕಂಡೆ–ಬೆಳಗಾಯ್ತು.

ಅಂಬಿಕಾತನಯದತ್ತ
(ದ. ರಾ. ಬೇಂದ್ರೆ)

## ೩೮. ಭಾರತ ತಪಸ್ವಿನಿ

ವೇದಋಷಿ ಭೂಮಿಯಲಿ ನಾಕನರಕಗಳಿಂದು
ಸಾವು ಬದುಕಿನ ಕಟ್ಟಕಡೆಯ ಹೋರಾಟದಲಿ
ಸಂಧಿಸಿವೆ. ಮಾನವನೆದೆಯ ಕಾಳಕೂಟದಲಿ
ಅಮೃತವನೆ ಹಾರೈಸಿ ಬಲಿರಕ್ತದಲಿ ಮಿಂದು
ಕಾದಿಹೆವು ಕಣ್ಣೀರು ತುಂಬಿ. ನಾಗರಿಕತೆಯ
ನಾಗಿನಿಯು ಪ್ರಗತಿನಾಮಕ ಫಣೆಯ ಮೇಲೆತ್ತಿ
ಚುಂಬಿಸಿಯೆ ಕೊಲ್ಲಲೆಳಸುತಿದೆ.–ಹಿಂದಿನ ಬುತ್ತಿ
ಸವೆಯುತಿದೆ. ಇಂದಿನ ಮಹಾತಪಸ್ವಿನ ಚಿತೆಯ
ರಕ್ತಿಮ ವಿಭೂತಿಯೊಳೆ ಮುಂದಿನ ನವೋದಯದ
ಧವಳಿಮ ಪಿನಾಕಧರನೈತಹನು ; ಮತ್ತೊಮ್ಮೆ
ಭಾರತಾಂಬೆಯು ಜಗದ ಬೆಳಕಾಗುವಳು ; ಹೆಮ್ಮೆ
ಗೌರವಗಳಿಂದ ಜನಗಣದ ಕಟುನಿರ್ದಯದ
ಲೋಭ ಬುದ್ಧಿಯ ಹೀನ ಕುಟಿಲತೆಯನುರೆ ನೀಗಿ
ಮೆರೆವಳು ತಪಸ್ವಿನಿಯೆ ಚಕ್ರವರ್ತಿನಿಯಾಗಿ !

ಕೆ. ವಿ. ಪುಟ್ಟಪ್ಪ

## ೩೯. ಬೇಲೂರಿನ ಶಿಲಾಬಾಲಿಕೆಯಿರು

ಶ್ರವಣಕೆ ಸಿಲುಕದ ಲಲಿತಾ
ರವ ಸುಖವಂ ರಸನೆಗೊದವದಮೃತ ದ್ರವಮಂ
ಎವೆಯಿಕ್ಕದ ನಯನಗಳಿಂ
ಸವಿವುದು ನೀವೆಂಬ ಮಾಯಗಾತಿಯರಿವರಾರ್

ಶೃಂಗಾರ ವಲ್ಲರಿಯೆ ಲತೆಯೊಡನೆ ಬಳುಕಿ ನೀಂ
ನೃತ್ಯಲಾಸ್ಯದಿನಾರನೊಲಿಸುತಿರುವೆ
ಮಾಧುರ್ಯ ಮಂಜೂಷೆ ಮಧುರತರ ಪಾನದಿಂ
ದಾರ ಚರಿತೆಗಳ ಶುಕಿಗುಸಿರುತಿರುವೆ
ಮುಗ್ಧಮೋಹನವದನೆ ಮುಕುರದೊಳ್ ನೋಡಿ ನೀ
ನಾರ ನೆನೆದಿಂದು ನಸುನಗುತಲಿರುವೆ
ಪ್ರಣಯಪ್ರರೋಹೆ ನೀಂ ಪ್ರಿಯತರಾಕೃತಿಯಿಂದೆ
ರುಷೆಯೆನಿಂತಾರೊಳಭಿನಯಿಸುತಿರುವೆ
ಶಿಲ್ಪಿವರ ಕುವರಿಯರೆ ಸೌಂದರ್ಯ ಮುದ್ರಿಕೆಯರೆ
ದೇವದೇವನ ಸೇವೆಗೈತರ್ಪ ಸಾಧುಕುಲಮಂ
ಭಾವ ವಿನ್ಯಾಸ ವೈಕೃತಿಗಳಿಂ ಬೆರಗುವಡಿಸಿ
ಚಂಚಲತೆಗೆಡೆಯೆನಿಸಿ ನೀವಿಂತು ನಿಲುವುದೇಕೆ
ಇನ್ನೆವರಮೊಲಿದು ಬಾರದ ನಿಮ್ಮ ಮನದಿನಿಯ
ನಿನ್ನು ಬಹನೆಂದು ನೀಂ ತಿಳಿವುದೆಂತು
ಅಗಣಿತ ಪ್ರೇಕ್ಷಕರೊಳಿಲ್ಲದಾ ಪ್ರೇಮಿ ಯೀ
ವಿಷಮ ಸಮಯದಿ ನಿಮಗೆ ದೊರೆವುದೆಂತು
ನಿಮ್ಮ ವದನದ್ಯುತಿಗೆ ಮರುಳಾಗಿ ಸೋಲದನ
ರಸಜೀವಿಯೆನ್ನುತಾದರಿಪುದೆಂತು
ನಿಮ್ಮ ನೂಪುರರವಕೆ ಬೆರಗಾಗಿ ನಿಲ್ಲದನ
ಭಾವಜ್ಞನೆಂದು ನೀಂ ಬಗೆವುದೆಂತು ?
ರೂಪವಿಲ್ಲದನೇನೊ ನಿಮ್ಮನಿಯನಲ್ಲದಿರೆ ತಾಂ
ರೂಪವಿಭವದಿನಿತ್ತ್ರಲೈತಂದು ಮೆರೆಯೆ ನಿಮ್ಮ
ಲಾಸಲಾವಣ್ಯಗಳ್ ಧರೆಯಿಂದೆ ಸಾರ್ವುವೆನುತೆ
ಮರೆಯಿಂದೆ ಕಂಡು ನಿಮ್ಮೊಲವಿಂದೆ ನಲಿವನೇನೋ
ಶ್ರುತಗಾನಮಭಿರಾಮಮಾದೊಡಶ್ರುತಗಾನ
ಮಭಿರಾಮತರಮೆನುತೆ ರಸಿಕರೊಸೆವರ್
ರಾಮಣೀಯಕ ಕುಲಮೆ ನಿಮ್ಮೊಡೆಯ ನುಡಿ ಕಿವಿಯ
ನಾನದೊಡಮೆಮ್ಮೆದೆಯ ಸೇರಲರಿಗುಂ
ಅದರಿಂದಮಲ್ತೆ ನಿಮ್ಮಭಿಮತಂಗಳನರಿತು
ಜಾಣರೆನಿಬರೊ ನಿಮ್ಮ ಪೊಗಳಿ ನಲಿವರ್
ವರ್ಷಶತಕಗಳಿಂದೆ ಕುಂದದಿಹ ಲಾವಣ್ಯ
ದಂತರಂಗವ ನಿಂತು ಬಗೆವೆನೀಗಳ್

ಬಿದಿಯ ಕರಚಾತುರಿಯೊಳನಿತಿನಿತು ಸುಳಿದು ಸರಿವ
ಮನುಜ ಮಾನಸದೊಳತಿ ಚಿತ್ರದಿಂ ಚರಿಸಿ ಮೆರೆವ
ಭುವನ ಜೀವನ ಸಸ್ಯಕಮೃತಬಿಂದುಗಳನೆರೆವ
ಪರತತ್ತ್ವಮಾಧುರಿಯನಿನಿಸು ನೀವ್ ತೋರ್ಪಿರಲ್ತೆ
ಆನಂದ ನಿಧಿಯಾ ಪರಾತ್ಪರನೆನಲ್ ಜಗದೊ
ಳಾನಂದಧೀವರಂ ಕಳೆಯಲಹುದೇಂ
ಪ್ರೇಮಮಯ ಮೂರ್ತಿಯಾ ಪರದೇವನೆನುತಿರಲ್
ಪ್ರೇಮಾಂಕುರಗಳಂ ಮುರಿಯಲಹುದೇಂ
ಸೌಂದರ್ಯ ಸರ್ವಸ್ವನಿಧಿಯಾತನೆನುತಿರಲ್
ಸುಂದರಾಕಾರರೊಳ್ ಮುಳಿಯಲಹುದೇಂ
ಜೀವನಾಧಾರನವನೆನುತೆ ಪೊಗಳುತ್ತಿರಲ್
ಜೀವನೋಜ್ವಲೆಯರಂ ಪಳಿಯಲಹುದೇಂ
ಜಗದುದಯ ಕಾರಣನ ವೈಮೆಗಳನರಿತು ನೆನೆದು
ಜಗದ ಯಾತ್ರೆಯ ನಡೆವ ಜನಕೆ ನಿಮ್ಮಂದದಿಂದಂ
ಸೊಗಮಿನಿಸುತೋರಿ ಸಂಸ್ಕೃತಿಪಥಂ ಸುಗಮಮೆನಿಸಲ್
ಅದುವೆ ದೇವಂಗೆ ನೀಮೆಸಗುವಾ ಸೇವೆಯಲ್ತೆ
ವಿಶ್ವತಂತ್ರ ರಹಸ್ಯ ಬೋಧನೋತ್ಸಾಹಮಿದು
ವಿಶ್ವಶಿಲ್ಪಿಯ ಸಭೆಯೊಳುಚಿತಮೆನಿಕುಂ
ವಿಗತ ಸೌಮನಸರುಂ ವಿಪರೀತ ಚರಿತರುಂ
ವಿಮುಖತೆಯನಾನಲದರಿಂದೆ ನಿಮಗೇಂ
ಮೊಳಗುಗೆಲೆ ಸರಳೆಯರೆ ನಿಮ್ಮ ಮೃದು ಪದವನನು
ಕರಿಪ ವಾದಿತ್ರಗಳ್ ಸೂಕ್ಷ್ಮದಿಂದೆ
ನೆಳಲನಿತ್ತೀ ಲತಾವಳಿ ನಿಮ್ಮನಾದರಿಸು
ಗೆಂದಿಗುಂ ತಂಬೆಲರ ಸುರಭಿಯಿಂದೆ
ನಗುತ ನಲಿಯುತ ಮೆರೆದು ಹಾವಭಾವಗಳನೆಸೆದು
ಮಂಜು ಜಲ್ಪವ ತೋರಿ ಮುಗ್ಧ ವೀಕ್ಷಣವ ಬೀರಿ
ಕಠಿನರಾಗದೆ ಕಾಲದೌಷ್ಟ್ಯದಿಂ ಕುಂದುವಡದೆ
ಶುಷ್ಕಹೃದಯರ್ಗೆ ನೀಂ ಸೌಹೃದವ ನೀಡುತಿಹುದಾ
ಅವ್ಯಕ್ತ ನಿನದದಿಂದಕಲಂಕಿತಾಂಗದಿಂ
ದನ್ಯೂನ ತರುಣತೆಯಿನಮಿತಯಶದಿಂ
ಚಿರಕಾಲಮೆಸೆವುದಾ ಚಿತ್ರವೇಧನಿಯರಿರ
ಕುದಿವ ಲೋಕಕಕೆ ಮುದದ ತಣಿವ ಬೀರಿ

ಸೌಂದರ್ಯವೇ ವಿಶ್ವತತ್ತ್ವವಾ ಪರತತ್ತ್ವ
ಭಾಸವೇ ಸೌಂದರ್ಯವೆನುತ ಸಾರಿ
ನಿಮಗೆ ಜನ್ಮವನಿತ್ತ ಚಿತ್ರಚತುರರ ಚಿತ್ತ
ದೇಕಾಗ್ರ ಭಕ್ತಿದೀಪಿಕೆಯ ಬೆಳಗಿ
ಪೊಳೆಯಿರೌ ಸರಸ ಜೀವನಮಂತ್ರ ಗುರುಗಳೆನಿಸಿ
ಪಳಿಯಿರೌ ಮಧುರಭಾವವ ಪಳಿವ ವಿಕೃತಮತಿಯಂ
ಕಳೆಯಿರೌ ರಸಕಲಾ ವಿಮುಖತೆಯ ಜನದ ಮನದಿಂ
ಬೆಳೆಯಿರೌ ಪ್ರೇಮ ಧರ್ಮೋದ್ಧರಣ ವಿಧಿಯೊಳೆಂದುಂ

ಡಿ. ವಿ. ಗುಂಡಪ್ಪ

## ೪೦. ವನಸುಮ

ವನಸುಮದೊಲೆನ್ನ ಜೀ
ವನವು ವಿಕಸಿಸುವಂತೆ
ಮನವನನುಗೊಳಿಸು ಗುರುವೇ–ಹೇ ದೇವ || ಪ ||
ಜನಕೆ ಸಂತಸವೀವ
ಘನನು ನಾನೆಂದೆಂಬ
ಎಣಿಕೆ ತೋರದೆ ಜಗದ ಪೊಗಳಿಕೆಗೆ ಬಾಯ್ ಬಿಡದೆ || ಅನು ||
ಕಾನನದಿ ಮಲ್ಲಿಗೆಯು
ಮೌನದಿಂ ಬಿರಿದು ನಿಜ
ಸೌರಭವ ಸೂಸಿ ನಲವಿಂ
ತಾನೆಲೆಯ ಪಿಂತಿರ್ದು
ದೀನತೆಯ ತೋರಿ ಅಭಿ
ಮಾನವನು ತೊರೆದು ಕೃತಕೃತ್ಯತೆಯ ಪಡೆವಂತೆ
ಉಪಕಾರಿ ನಾನು ಎ
ನ್ನುಪಕೃತಿಯು ಜಗಕೆಂಬ
ವಿಪರೀತ ಮತಿಯನುಳಿದು
ವಿಪುಲಾಶ್ರಯವನೀವ
ಸುಫಲ ಸುಮಭರಿತ ಪಾ
ದಪದಂತೆ ನೈಜಮಾದೊಳ್ಪಿನಿಂ ಬಾಳ್ವವೊಲು

ಡಿ. ವಿ. ಗುಂಡಪ್ಪ

# ೫೧. ತೆಂಗಾಳಿ

ಬಾರ ಮುಂಬೇಸಗೆಯ ಮೆಲುನಡೆಯ ಮಾರುತ
ಬಾರಯ್ಯ ಮಧುಮಾಸದೈತರವ ಸಾರುತ
ಬಾರ ಲೋಕಕೆ ಹರಿದೈಸಿರಿಯ ಬೀರುತ
ಬಾರ ಸೊಗಸಿನ ತೆರನ ಜನಕೆಲ್ಲ ತೋರುತ.

ಮೊದಲ ವತ್ಸರದ ಹಣ್ಣೆಲೆ ಬಣ್ಣ ಮಾಸಿ
ಉದುರ್ವ ದಿನ ಬಹುದನರಿ ಭಯಧಿ ಹಾರೈಸಿ
ಇದಿರ್ನೋಳ್ಪುದರ ಮೇಲೆ ಮೆಲುಮೆಲನೆ ಬೀಸಿ
ಸದಯ ಬೆಸುಗೆಯ ಬಿಡಿಸಿ ಅದನು ಕಡೆಹಾಯ್ಸು.

ತರುಲತಾರಾಜಿಗಳ ಬಾಡಿರುವ ಮೆಯ್ಯ
ಕರುಣಿ ಕೂರ್ಮೆಯ ತೋರುವೀ ನಿನ್ನ ಕೈಯ
ಸರಸ ಸಂಪರ್ಕದಿಂ ನಲಿಸುತಕ್ಷಯ್ಯ
ಪರಸತ್ತ್ವವಲ್ಲಿ ತಳಿರ್ವಂತೆ ಹರಸಯ್ಯ

ಎಲ್ಲ ಲತೆಗಳ ನೋಳ್ಪ ಮೊದಲಲ್ಲಿ ಬಂದು
ನಲ್ಲ ನೀ ಮರೆದಿರಲು ವಿರಹದಲಿ ನೊಂದು
ತಲ್ಲಣಿಸುವೀ ಮಲ್ಲಿಗೆಯನು ತರಿಸಂದು
ಲಲ್ಲೆಯಿಂ ಸಂತೈಸಿ ಪೊರೆ ದೀನಬಂಧು.

ಎನ್ನ ಜೀವನ ನಿನ್ನ ಸೊಗದಿನಾವರಿಸು.
ಹಣ್ಣೆಲೆವೊಲೆನ್ನ ಹಳೆಗನಸುಗಳ ಹರಿಸು
ಚೆನ್ನ ಹೊಸಬಾಳ ಹೊಸ ರಸಗಳನೊಸರಿಸು
ಚೆನ್ನ ಹೊಸ ತಳಿರು ಸುಮಫಲಗಳನು ತರಿಸು.

ಅರಿಯದವರಾವು ಎಮ್ಮಯ ಮನದ ನೂರು
ವಿರಸತೆಯ ತೊಟ್ಟುಗಳ ಕಳಚಿ ಅವ ತೂರು
ಮರಣದಲಿ ಜೀವನದ ಮೊಳೆಯಿಹುದ ತೋರು
ಪರಮಾತ್ಮನುಂಟು ಸುಖದೊಳಮೆಂದು ಸಾರು.

ಮೆಲುಮೆಲನೆ ಪಸರಿಸುತೆ ತೆಂಕಣಿಂ ಬಾರ
ಪಲವಿಧದ ಸಿಂಗರವ ವನಗಳಿಗೆ ತಾರ
ನಲವಿನಂಕೆಯ ನಿತ್ಯತೆಯ ತೋರು ಧೀರ
ಚೆಲುವು ದೊರೆಯಾಳ್ವುದನು ಸಾರೈ ಸಮೀರ.

ಶ್ರೀನಿವಾಸ
(ಮಾಸ್ತಿ ವೆಂಕಟೇಶ ಅಯ್ಯಂಗಾರ್)

# ೪೨. ಕಸ್ಮೈ ದೇವಾಯ

ಅಂದಿನಾ ದೇವರುಗಳೆಲ್ಲ ಮಡಿದುರುಳಿಹರು
ಇಂದ್ರ ವರುಣರು ಧನದ ಮಿತ್ರಪೂಷಣರು –
ಸಂದಿದ್ದ ದೈವತ್ವದಗ್ಗಳಿಕೆ ಹೋಗಿಹುದು
ಅಂದಿನವರುನ್ನತಿಯ ಕಳಶ ಕೂಲಿಹುದು
ಮಾನವರ ಸುಪ್ರಖರ ಮನದ ಮೊನೆಯುಲಿಗಿನ
ಘಾತದಲಿ ಕಡುನೊಂದು ಸೋಲನೊಪ್ಪಿದರು
ಧ್ಯಾನ ಪೂಜೆಗಳಿನ್ನು ತಮಗೆ ಸಲ್ಲವು ಎಂದು
ಮಾತಿನೊಪ್ಪಿಗೆಯಿತ್ತು ಶರಣು ಬೇಡಿದರು.
ಅಚ್ಚರಿಯ ಮೋಹದಲಿ ಆಗಸವ ನೋಡುತ್ತೆ
ಉಚ್ಚಕಂಠದಿ ಹಾಡಿದಾ ಭಕ್ತರಳಿದಿಹರು
ನಯದಿಂದ ಭಯದಿಂದಲವರನೊಲಿಸುವ ಹಾಡು
ಭುವಿಯಿಂದ ಜನದಿಂದ ತೊಲಗಿಹೋಗಿಹುದು,
ಸಾಗರನ ಸುರನೀಲ ನೀಲಿಮತೆಯನು ನೋಡಿ
ಭೋರ್ಗರೆಯುತುರ್ಕುವಾರ್ಭಟೆಯ ಕೇಳಿ
ನಾಲ್ದೆಸೆಯೊಳೊಡ್ಡಿರುವಪಾರ ಗಂಭೀರತೆಗೆ
ಬಾಗಿ ಗೈಯುವ ವರುಣ ಪೂಜೆ ಕಾಣಿಸದು.
ನಭದೆಡೆಗೆ ಮೊಗವೆತ್ತಿ ಪೂಪತ್ರವೆರಚುತ್ತೆ
ಕರುಣಿಸೈ ಪರ್ಜನ್ಯ ಎಂಬುದಿಲ್ಲಾಯ್ತು
ಗುಡುಗು ಗರ್ಜನೆ ಕೇಳಿ ನಡುಗಿ ಬಲಿಯೊಪ್ಪಿಸುತೆ
ಒಡೆಯ ರುದ್ರನ ರೌದ್ರವಳಿಪ ಪರಿಪೋಯ್ತು.
ಗೋಧನವನುಳುಹಯ್ಯ ಹೆಚ್ಚಿಸೈ ಹೇ ಪೂಷ !
ದವಸಧಾನ್ಯಗಳೀಯೊ ದೇವ ದೇವೇಶ !
ಧನಕನಕ ವಾಹನವ ಕರುಣಿಸೈ ಧನದ, ಭೋ
ಘನರನರ್ಘರೆ, ಎಂಬ ಮೊರೆಯು ಕೇಳಿಸದು
ಅನ್ಯ ದೇವರ್ಕಳು ದಾಳಿಟ್ಟರೇರಿದರು
ಸುಮನಸರು ಪರಬ್ರಹ್ಮ ಹರಿಹರಾದಿಗಳು
ಇನ್ನೈದುಸಾವಿರ ವರುಷವಾಳಿದರಿವರು
ಇಂದಿವರ ಆಳ್ವಿಕೆಗು ಚ್ಯುತಿಯು ಬಂದಿಹುದು
ಹಳೆಯಕಾಲದ, –ತಂದೆತಾತದಿರ ದೇವರುಗ
ಳಳಿದು ಹೋಗುವ ಕಡಿದು ಕಾಲ ಬರುತಿಹುದು

ಇಳಿದಿಳಿದು ಕಡುನಿಡಿದು ನೆಳಲೊಂದು ಮೇಲಿಂದ
ಅಳಿಸಿಹೋಗುತಲಿಹುವು ಅವರ ಮೂರ್ತಿಗಳೂ.

ಪೋಪವರ ಪದವಿಗಳಿಗಿನ್ನಾರು ಬಂದಪರೊ
ಕೋಪಿಗಳೊ ಕರುಣಿಗಳೊ ತಿಳಿಪ ಕೋವಿದರೊ
ಆರನರಸುತೆ ಹೋಗಿ ಹವಿಸನೀಯಲು ಬೇಕೊ
ಆವ ಶೀಲವನವರು ಜಗದಿ ಬಿತ್ತುವರೊ

ಇಲ್ಲದಿರೆ ಬೇರಾವ ದೇವರೇ ಬಾರರೋ
ಇಲ್ಲದೊಂದಕೆ ಹೆಸರನಿತ್ತು ಕರೆಯುವೆವೊ
ಇಲ್ಲದಿರೆ ಮಾನವನ ಸುಗುಣವೆ ದೈವವೋ
ಎಲ್ಲಿಗೂ ಹರಿಯದಿಹ ಸಂಶಯವೆ ಕೊನೆಯೊ !

ವಿ. ಸೀ.
(ವಿ. ಸೀತಾರಾಮಯ್ಯ)

## ೪೩. ಕೋಗಿಲೆ

ಹಿರಿಮಂಜು ಬಿಟ್ಟಿಲ್ಲ
ಚಳಿಗಾಳಿ ನಿಂತಿಲ್ಲ
ಮೈ ನಡುಕ ಪೋಗಿಲ್ಲ
ಇಬ್ಬನಿಯು ಸುರಿಮಳೆಯು ನಿಲ್ಲಿಸಿಲ್ಲ ;
ಶಿಶಿರ ಸಾಮ್ರಾಜ್ಯಕ್ಕೆ ಚ್ಯುತಿಯು ಬಂದಿಲ್ಲ ;
ಚ್ಯುತಿ ಬರುವುದೆಂಬೊಂದು ಚಿಹ್ನೆಯಿಲ್ಲ.
ತರಗೆಲೆಗಳುದಿರಿಲ್ಲ
ತಾರೆವೊಗವರಳಿಲ್ಲ
ತರುವೊಂದು ಚಿಗುರಿಲ್ಲ
ಚಿಗುರಿರ್ಪುದೆಂಬೊಂದು ಚಿಹ್ನೆಯಿಲ್ಲ ;
ಹಿಮಕರನ ಬಿಳಿಕಿರಣ ನಗುಬೀರುವಂತಿಲ್ಲ,
ಬೆಳದಿಂಗಳುಂಡಾರು ಆಡುವವರಿಲ್ಲ
ಹಸುರಿನಿಸು ಕಾಣದಿಹ
ಬರಲು ಕೊಂಬೆಗಳೇರಿ
ಮರದ ತುದಿಯನು ಸಾರಿ

ಏಕಾಂಗಿ ನೀನೇಕೆ ಉಲಿಯುತಿಹೆ ಇಂತು ?
ಆವ ಸಂತಸ ನಿನದು ಹೇಳು ಕೋಗಿಲೆಯೇ !
ಏಂ ಪ್ರಮತ್ತತೆ ಇಂದು ನಿನ್ನ ಕೂಗಿನಲಿ !

ಎತ್ತಲೇಂ ಚೆಲುವಿಲ್ಲ
ಸಂಗಡಿಗರಾರಿಲ್ಲ
ಗಿಳಿಪಿಂಡು ಗೊರವಂಕ

ಹೊಂಬಕ್ಕಿ ಹಾಡುತಿಹ ಸರ ಕೇಳುತಿಲ್ಲ ;
ಆವ ಸೊಗ ಬರುವುದನು ನೀನಲ್ಲಿ ಕಾಣುತಿಹೆ,
ನಡು ಚೈತ್ರವೆಂಬಂತೆ ಉಲಿಯುುತಿಹೆಯೇ !

ನಿಡುಬಯಲನಿರಿಯುತಿಹೆ
ದೆಸೆಗಳನು ತುಂಬುತಿಹೆ
ಕಿವಿಗಳನು ಬಿರಿಸುತಿಹೆ

ಎದೆವಕ್ಕಿ ಆಸೆಗಳ ಕೆರಳಿಸುತ್ತಿಹೆಯೋ !
ಬಂದೀತು ಬಂದೀತು ನಗುಗಾಲ, ಅಕ್ಕ ಓ
ಎಂದು ಕಂಠವನೆತ್ತಿ ಹಾಡುತಿಹೆಯೋ !

ನಮಗೆ ಗೋಚರಿಸದಿಹ
ಪರರಾರು ಅರಿಯದಿಹ
ನೀನೊರ್ವ ಕಾಣುತಿಹ

ಹೊಸಜೀವ ಸಂಚಾರವಾವುದಿಹುದೋ !
ನೆಲದಿಂದ ಬೇರಿಂಗೆ, ಬೇರಿಂದ ತರುವಿಂಗೆ
ಜೀವರಸವೇರುವುದ ಕಾಣುತಿಹೆಯಾ !

ಒಣಗಿರುವ ಶಾಖೆಗಳ
ಶಾಖೆಯುಪಶಾಖೆಗಳ
ನಾಳನಾಳದಿ ಹರಿದು

ಎಳೆಗೆಂಪು ಮೊಸುಗಳು ಕುಡಿಯಿಟ್ಟವೇನು ?
ಪಸುಳೆಕುಡಿ ಮೈಗಂಧ ನೀ ಸವಿದೆಯೇನು ?
ಶಿಶಿರವಳಿವುದು ಚೈತ್ರ ಬಹುದೆಂಬೆಯೇನು ?

ವಿ. ಸೀ.
(ವಿ. ಸೀತಾರಾಮಯ್ಯ)

## ೪೪. ಅಭೀಃ

ಕಾಡ ಮೌನವ ಸೀಳಿ ಹಬ್ಬುತಿದೆ ಕೇಳುತಿದೆ
ಬಿತ್ತರದ ದಿಕ್ತಟಗಳಡ್ಡಿ ದಾಟುತಿದೆ !
ಉಳಿದೆಲ್ಲ ನುಡಿಗಳನು ಮುಳುಗಿಸುತೆ ಮೊಳಗುತಿದೆ
ಬಾಳ ಹೆದ್ದಾರಿಯನು ಹಿಡಿದೆತ್ತಿ ತೋರುತಿದೆ
–ಅಭೀಃ ! ಅಭೀಃ ! ಅಭೀಃ ! ಎಂಬಮೃತವಾಣಿಯಿದು
ಮೂವತ್ತು ಶತಮಾನಗಳ ಮೆಟ್ಟಿ ಕೇಳುತಿದೆ
ಕಾಲದಾ ಕರೆಯಂಚಿನಾಚೆಯಿಂದ
ಯಜ್ಞಶಾಲೆಗಳಿಂದ ಬಲಿಯಿಂದ ಸೆರೆಯಿಂದ
ತೊಂಡು ಮಲೆತೆಲ್ಲವನು ತುಳಿದತ್ತಣಿಂದ
ಕಲ್ಲುಗಾಣಗಳಿಂದ ಶಿಲುಬೆಗಳ ನೋವಿಂದ
ವಿಷಪಾತ್ರೆಯೊಡಲಿಂದ ಸುಡುವುರಿಯ ಮಡಿಲಿಂದ
– ಅಭೀಃ ! ಅಭೀಃ ! ಅಭೀಃ ! ಎಂಬ ನುಡಿ ಏಳುತಿದೆ
ಹೇಡಿತನದಳುಕುಗಳ ಓಡಿಸಿದೆ ಚೆದರಿಸಿದೆ
ವೀರಸಂಜೀವನವ ಊಡಿಸುತಿದೆ !
ಬಲಹೀನರೆಂದೆತ್ತಲಾತ್ಮವನು ಗಳಿಸಿದರು ?
ಬಲಕಾಗಿ ಕಾಯ್ವವರು ಏಗೈವರು ?
ಚಲವೊತ್ತ ಅಧಿಕಾರದಂಡಲೆಗೆ ಬೆದರುವರು
ಎಂದೇನ ಸಾಧಿಸುವರೆಂದೆಮ್ಮ ಕೇಳುತಿದೆ
– ಅಭೀಃ ! ಅಭೀಃ ! ಅಭೀಃ ! ಎಂಬ ಸಗ್ಗದ ಬಿತ್ತು
ನರರ ಎದೆವೊಲಗಳಲಿ ಬೇರಿಟ್ಟು ಮೊಳೆಯುತಿದೆ !
ಬಲದ ತಿರುಳನು ಬಲಿಸಿ ಬೆಳೆಸುತ್ತಿದೆ !
ನಿಲ್ಲಿಸದು ಕೂಡಿಸದು ಮಲಗಿಸದು ಕೆರಳಿಪುದು
ಆಡವಾಟದ ನಡುವೆ ಕೂಟಗಳ ನಡುವೆ !
ಆಸರಲಿ ಕಣ್ಣೆವೆಯು ಮುಚ್ಚಿ ಬರುತಿರಲತ್ತ
ಹೊಸತವಕದೊತ್ತಿನಲಿ ಮೇಲೆತ್ತಿದೆ !
– ಅಭೀಃ ! ಅಭೀಃ ! ಅಭೀಃ ! ಇದೆ ಮಂತ್ರವೆನ್ನುತ್ತೆ
ಎಂಟು ದಿಕ್ಕಿನ ಗಾಳಿಗುಸಿರೆತ್ತಿ ಊದುತಿದೆ !
ನೀಳ್ಗೊರಲ ತುತ್ತೂರಿಯನೂದಿಸುತಿದೆ !
ಯುಗದಗಲ ಜಗದಗಲ ಎಡರೆದ್ದು ನಿಂತಾವು !
ಸಂರಾಜರಬ್ಬರವು ನಡುಗಿಸೀತು !

ಕುಲವೆಂಬ ಮತವೆಂಬ ಕೆಳೆಯೆಂಬ ನಾಡೆಂಬ
ಮಮತೆಗಳು ದಾರಿಯಲಿ ಕತ್ತಲಿಟ್ಟಾವು!
–ಅಭೀಃ! ಅಭೀಃ! ಅಭೀಃ! ಎಂಬ ಧ್ರುವ ತಾರಗೆಯು
ಕತ್ತಲಲಿ ತವಿಲಲ್ಲಿ ದಿಕ್ಕನ್ನು ಕಾಣಿಪುದು
ನಿಜಕಿಟ್ಟ ಮುಸುಕೆತ್ತಿ ಮರೆ ತೆರುವುದು.
ಮಣಿಯದಿಹ ಮನವೊಂದು ಸಾಧಿಸುವ ಹಟವೊಂದು
ನಿಜದ ನೇರಕೆ ನಡೆವ ನಿಶ್ಚಲತೆಯೊಂದು–
ಅನ್ಯಾಯಕೆಂದೆಂದು ಬಾಗದೆಚ್ಚರವೊಂದು
ಮರುಕಕ್ಕೆ ಪ್ರೇಮಕ್ಕೆ ಚಿರ ತೆರೆದ ಎದೆಯೊಂದು
–ಅಭೀಃ! ಅಭೀಃ! ಅಭೀಃ! ಎಂಬ ತಾರಕ ವಾಕ್ಯ
ನಾಡಿಯನು ನಡಸುತಿರೆ, ಬಾಳನ್ನು ತಿದ್ದುತಿರೆ
ನಡೆ ಮುಂದಕ್ಕೆನ್ನುತ್ತೆ ಕೂಗುತಿವೆ ಕುಗ್ಗಿಸುತಿವೆ.

ವಿ. ಸೀ.
(ವಿ. ಸೀತಾರಾಮಯ್ಯ)

## ೪೫. ನವೀನ

ನಾಡಿನ ಪುಣ್ಯದ ಪೂರ್ವದಿಗಂತದಿ
ನವ ಅರುಣೋದಯ ಹೊಮ್ಮುತಿದೆ!
ಚಿರ ನೂತನ ಚೇತನದುತ್ಸಾಹದಿ
ನವೀನ ಜೀವನ ಚಿಮ್ಮುತಿದೆ!
ಅಭಿನವ ಮಧುಕೋಕಿಲ ಕಲಕಂಠದಿ
ಸ್ವರಸುರಚಾಪಗಳುಣ್ಮುತಿವೆ!
ಶ್ಯಾಮಲ ಕಾನನ ಸುಮುಸಮ್ಮೇಲದಿ
ಇಂಚರ ಸಾಸಿರ ಪೊಣ್ಮುತಿವೆ!
ಕಿವಿ ಕಣ್ಣಾಗುತಿದೆ!
ಕಣ್ ಕಿವಿಯಾಗುತಿದೆ!
ಭೂಮವ್ಯೋಮದ ನೀಲಾಂಗಣದಲಿ
ಕೆಂದರೆ ಮುಗಿಲಿನ ರಂಗೋಲಿ
ರಂಜಿಸುತಿದೆ ಹೊಳೆ ತೆರೆಯುಚ್ಚ್ಯೋತ್ತಿದ
ಕೆಂಪಗೆ ನುಣ್ಮಳಲನು ಹೋಲಿ

ಹಿಮಮಣಿ ಸಿಂಚಿತ ತೃಣವಿಸ್ತಾರದಿ
ನೇಸರು ಕಿಡಿಬಲೆ ನೆಯ್ಯುತಿದೆ;
ವಿಹಂಗ ದಂಪತಿ ತರುಶಾಖಾಗ್ರದಿ
ಪ್ರೇಮಾಲಾಪನೆ ಗೈಯುತಿದೆ;
ನವೀನ ಹೃದಯಗಳೇಳಿ,
ನವೀನ ಗಾನವ ಕೇಳಿ!
ನಾಡಿನ ಪುಣ್ಯದ ಪೂರ್ವದಿಗಂತದಿ
ನವ ಅರುಣೋದಯ ಹೊಮ್ಮುತಿದೆ!
ಚಿರ ನೂತನ ಚೇತನದುತ್ಸಾಹದಿ
ನವೀನ ಜೀವನ ಚಿಮ್ಮುತಿದೆ!

ಕೆ. ವಿ. ಪುಟ್ಟಪ್ಪ

## ೪೬. ಯುಗಾದಿಯ ಹಾಡು

ಏಳಿ ರವಿಯು ಮೂಡುವೊಳಗೆ
ಬಾನ ತಳಿರು ಬಾಡುವೊಳಗೆ
ಇಂದು ಮಧುರ ಜನವ, ಜಗವ
ಮುದದಿ ತೇಲಿಸುತ್ತ ಬರುವ!
ಇಂದು ಯು–ಗಾದಿಯು
ಹೊಸ ವರ್ಷದಾದಿಯು
ಬೇವು ಚಿಗುರ, ಹೂವು ಹಣ್ಣ,
ಮಾವು ತಳಿರ ತನ್ನಿರಣ್ಣ
ದಿಟ್ಟ ಕಜ್ಜಿ ಹಾಕಿ, ಶಿಖೆಗೆ
ದವನ ಸುರಗಿ ಸೆಕ್ಕಿರಣ್ಣ
ಹಹ್ಹೊ! ಯುಗಾದಿಯು,
ಹರುಷಕೆಲ್ಲ ಗಾದಿಯು!
ಹಳೆಯದೆಲ್ಲ ಮರೆಯಿರೈ,
ಹೊಸದು ಬಾಳ ತೆರೆಯಿರೈ,
ಕಳೆದ ವರುಷಕಿಂದು ಒಂದೆ
ಕಣ್ಣಹನಿಯ ಸಲಿಸಿರೈ.

ಮುಪ್ಪು ಹರೆಯ ಮರೆಯುತ
ಬೆಪ್ಪ, ಜಾಣ ಬೆರೆಯುತ–
ಲಗ್ಗೆ ಚೆಂಡು, ಚಿಣ್ಣಿಕೋಲು
ಏಣಿ ಉಯ್ಯಾಲಾಡಿರೈ.
ಹಬ್ಬದೂಟ ಉಣುವ ಮುನ್ನ
ಬೇವು ಬೆಲ್ಲ ಸವಿಯಿರಣ್ಣ :
  ‘ ನೂರು ವರುಷ ಬಾಳುವ,
  ಸಾವ ದೂರ ಮಾಡುವ,
  ವಜ್ರಕಾಯರಾಗುವ,
  ಸಿರಿಯ ಸುಖವ ಕಾಣುವ ’
ಎಂದು ಬೆಲ್ಲ ಮುಂದು ಮಾಡಿ
ಬೇವು ಬೆಲ್ಲ ಮೆಲ್ಲಿರಣ್ಣ
ಹಿರಿಯ ಜನಕೆ ನಮಿಸಿರಯ್ಯ
ಹರಸಿ ‘ ಸುಖಿಸಿ ‘ ಎಂಬರಯ್ಯ
  ಗಂಟೆ ನಾದ ಕೇಳಿರೈ,
  ಗುಡಿಗೆ ನಡೆವ ಬನ್ನಿರೈ,
ಭಕ್ತಿಗೂಡಿ ನಲವನದುಮಿ,
ಆಸೆ ಸಲಿಸು, ಭಯವನೊರಸು,
ಇಂಥ ಹಬ್ಬ ನೂರ ಕರಸು
ಎಂದು ಕರವ ಮುಗಿಯಿರೈ.
ಅಹ್ಹ! ಬಲ್ಲೆ ನಿಮ್ಮ ಮನವ
ಹಳೆಯ ವರುಷದಳಲ ನಲವ
ನಿಂದು ನೆನೆದುಕೊಳ್ಳಿರಯ್ಯ,
ಮುಂದ ನೋಡಿ ಇರುಳ ಕಂಡು
ಬೆಳಕನರಸಿ ದುಗುಡಗೊಂಡು
ಅಳಲಿ, ಬೆದರಿ, ಸುಯ್ಯಿರಯ್ಯ
  ಬೆದರಲೇಕೆ ?
  ಸುಯ್ಯಲೇಕೆ ?
ಭುಜವ ತಟ್ಟ ನಿಲ್ಲಿರಯ್ಯ
ನಮ್ಮ ಹಕ್ಕು ಹರುಷವಯ್ಯ
ಹೋದುದೆಲ್ಲ ಹೋದುದೈ.
ಹೊಸದು ಬಾಳು ನಮ್ಮದೈ.

ಇಂದು ಯುಗಾದಿಯು,
ನಮ್ಮ ಒಸಗೆಯಾದಿಯು !

ಪು. ತಿ. ನರಸಿಂಹಾಚಾರ್

## ೪೭. ಕನ್ನಡತಾಯ ನೋಟ

೧

ಹಿರಿಯರಿರ, ಕಿರಿಯರಿರ, ಅಕ್ಕತಂಗಿಯರಾ, ಅಣ್ಣತಮ್ಮದಿರಾ,
ಒಸಗೆನುಡಿ ತಂದಿಹೆನು ನಾನೊಂದ, ತಾಯಿಂದ, ಸಿರಿಯ ತಾಯಿಂದ–
ಕೇಳುವಿರ ಕಿವಿಗೊಟ್ಟು, ತಾಳುವಿರ ಎದೆನೆಟ್ಟು, ತಾಳಿ ಬಾಳುವಿರಾ ?
ಕಣ್ಣಾರ ಕಂಡೆನವಳನು–ಕಂಡು, ತಂದಿಹೆನು, ಕೇಳಿ.
ಅವಳೆನ್ನೊಳಾಡಿದುದನಾಡುವೆನು ನಿಮ್ಮಲ್ಲಿ, ಕೇಳಿ.

೨

ಬಳಸಿ ಬಂದೆನು ಸುತ್ತಿ ಕನ್ನಡದ ನಾಡುಗಳ ಸಿರಿಯ ನೋಡುತ್ತ,
ತಾಯಡಿಯ ಹುಡಿಯ ತಲೆಗಾನುತ್ತ, ಹರಕೆಯ ಪವಿತ್ರ ಯಾತ್ರೆಯಲಿ.
ಏನು ಚೆಲುವಿನ ನಾಡು ! ಚೆಲುವು ಚೆಲ್ಲುವ ನಾಡು ! ಕನ್ನಡದ ನಾಡು !
ಏನು ಚಿನ್ನದ ನಾಡು ! ನಮ್ಮೊಲುಮೆಯಾ ನಾಡು ! ನಮ್ಮಿನಿಯ ನಾಡು !
ಕಾವೇರಿಯಿಂದಮಾ ಗೋದಾವರಿಯವರೆಗೆ ಚಾಚಿರುವ ನಾಡು !
ಬಳಸಿದೆನು, ಸುತ್ತಿದೆನು, ಕಣ್ದಣಿಯ ನೋಡಿದೆನು, ಕುಣಿದು ಹಾಡಿದೆನು :
ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾಂಬೊಲ ಕಪ್ಪು, ಬೆಟ್ಟಗಳು ಕಪ್ಪು,
ಕಾರ್ಮೋಡಗಳು ಕಪ್ಪು, ಹೊಳೆ ಕೆರೆಯ ಮಡು ಕಪ್ಪು, ತಾಯ ಕಾಲ್ ತೊಳೆವ
ಉಪ್ಪು ಕಡಲದು ಕಪ್ಪು, ಜನ ಕಪ್ಪು-ಏನೆಂದೆ ? ತಪ್ಪು, ತಪ್ಪು !-
ಮೂಡ ಪಡುವಲು ತಿರುಗು, ಬಡಗ ತೆಂಕಲು ತಿರುಗು, ಕರ್–ನಾಟದಲ್ಲಿ,
ನಿಮ್ಮೂರ ಹೆಣ್ಣುಗಳ ಕಣ್–ನೋಟ, ತಣ್ ನೋಟ ಕರ್ಪು, ಬಲು ಕರ್ಪು !
ಕರ್ಪೊ, ಬೆಳ್ಪೋ ಕಾಣೆ, ಕನ್ನಡದ ಕಣ್ಣೋಟ–ರೂಪು, ಅರ್ಪು !
ಓ ತಾಯೆ, ಕನ್ನಡದ ಪೆರ್-ತಾಯೆ ನಮ್ಮಮ್ಮ, ದೇವಿ, ಸಾಮ್ರಾಜ್ಞಿ,
ಸುಳಿಗುರುಳು, ನಗೆಗಣ್ಣು ಏನು ಕಪ್ಪೇ ನಿನಗೆ–ಮುತ್ತಿಡುವ ಕಪ್ಪು !
ನಿನ್ನ ಕಲಿಗಳ ರೂಪು, ಕೆಚ್ಚೆದೆಯ ಕಟ್ಟಾಳ ರೂಪು, ನೆಚ್ಚಾರ್ಪು,
ಆರು ತಡೆಯಲುಬಹುದು-ಪುಲಿಕೇಶಿ ಹರ್ಷರೇ ಹೊಯ್ದು ಸಾರುವರು.

ಕರ್ಪಿರಲಿ, ಕೂರ್ಪಿರಲಿ, ನಿನ್ನ ಬೆಳ್ಪನು ಹೇಳು–ಕೂರಸಿಯು ಮಿಂಚು,
ಕಾರ್–ಮಿಂಚು, ಪೆಣ್ಮಣಿಗಳಾ ಕಣ್ಣ ನುಣ್ಮಿಂಚು, ಅರಿದರಾ ಕೂರ್–ನೋಟ
ಮಿಂಚು !
ಮೆಲ್ಲ ಮೆಲ್ಲನೆ ತೇಲಿ, ಆಳದಲಿ ಮಲೆಯೆಡೆಯೊಳಲುಗದೆಯೆ ಅಲುಗಿ,
ಕಡಿದು ಬಂಡೆಗೆ ಬಂದು, ನೆಗೆದು ಬೆಳ್ಳಂಗೆಡೆವ ನೀರ್–ಬೀಳ ಬೆಳ್ಪು !
ಕಡೆದ ನೊರೆ, ಚಿಗಿವ ನೊರೆ, ತೂರು ನೊರೆ, ಕುದಿವ ನೊರೆ, ಬೆಳ್ಪಿನೊಳ್ ಬೆಳ್ಪು !
ಆ ಬೆಳ್ಪು, ಆ ತೆಳ್ಪು, ಆ ಮೆಲ್ಪು–ನಿನ್ನ ಮಕ್ಕಳ ಬಾಳಿನೊಳ್ಪು ;
ನೀರ್–ಬೀಳ ಬೆಳ್ನೊರೆಯ ಬಿಸಿಲ ಬೆಳ್ದಿಂಗಳಾ ಮಳೆಬಿಲ್ಲ ತಳ್ಪು !
ಬೆಳ್ಗೊಳವೊ, ತೀರ್ಥಗಳೊ, ಧರ್ಮಧರ್ಮದ ತಿರುಳೊ, ಪಾಡುವರ ಪುರುಳೋ,
ಒಳ್ಗನ್ನಡದ ಕಲೆಯೊ, ಕುಸುರಿಗೆಲಸದ ಸಿಲೆಯೊ, ಆ ನಯವೊ, ಮೆರುಗೊ !
ನಿನ್ನ ಚಿಣ್ಣರ ಸೊಬಗೊ, ಬೆಡಗೊ, ಮೆಲ್ನುಡಿ ತಣ್ಪೊ, ಕೊಡುಗೈಯ ಬಿಣ್ಪೋ !
ಓ ಎನ್ನ ತಾಯಿ, ಕನ್ನಡ ತಾಯಿ, ನಮ್ಮವ್ವ, ದೇವಿ, ಸಾಮ್ರಾಜ್ಞಿ,
ನಿನ್ನನರಸುತ ಸುಳಿವ, ನೋಂಪಿಯೆನೆ ನಿನ್ನೊಲುಮೆ–ನಾಡನೊಳಕೊಳುವ,
ನಿನ್ನ ಚೆಲುವನು ಸವಿವ ಮಗುವಾರು ತಣಿಯದನು, ಹಾಡಿ ಕುಣಿಯದನು,
ಭಕ್ತಿಯಲಿ ತಲೆದೂಗಿ ಬಾಗಿ ಮಣಿಯದನು !

೩

ಚೆಲುವು ಕಣಿ ಕಾರ್ವಾರವೆದೆ ತುಂಬಿ, ಗೋಕರ್ಣದಲಿ ಮಿಂದು, ಸಂದು,
ಉಡುಪಿಯಲಿ ಕೃಷ್ಣಂಗೆ ಕೈಮುಗಿದು, ಮಂಗಳೂರಿನ ಹಿರಿಯ ನಂಟರಲಿ ನಿಂದು,
ಚಾರ್ಮಾಡಿ ಘಾಟಿಯನು ಬಳಬಳಸಿ ಮೇಲೇರಿ ಬಂದವನು ಕಂಡೆ, ಕಂಡೆ !
ಮೇಲೆ ತಿಳಿಯಾಕಾಶ, ಸುತ್ತಲೂ–ಬೆಟ್ಟ–ಸಾಲ್–ತೋಳ ತೆಕ್ಕೆಯಲಿ
ಕಣಿವೆಯೇರುವ ಕಾಡು, ದಟ್ಟಡವಿ, ಒಮ್ಮೊಮ್ಮೆ, ಹಕ್ಕಿಗಳ ಹಾಡು,
ಮರದ ಮರೆಯಲಿ ದುಮುಕುವಬ್ಬಿಗಳ ಹಬ್ಬಿ ಹರಡಿದ ಕೂಗು ಕೊರಲು !
ಕಂಡೆನಾಕೆಯನಲ್ಲಿ, ದೂರದಲಿ, ಕಣ್–ಪುಣ್ಯ ಮಿಂಚಿ ಮರೆಯಾಯ್ತು !
ಕನ್ನಡದ ಆ ನೋಟ ದೇವಿಯಾ ದರ್ಶನಂ ಪೊಳೆದು ಬಯಲಾಯ್ತು !
ಎವೆ ಹೊತ್ತಿನಾ ನೋಟ, ಸವಿನೋಟ, ಸವಿಯದೆದೆ–ಚಿಮ್ಮುತಿಹುದಿನ್ನೂ !
ಅಮೃತಲೋಕದ ಮಾತೆ, ಅಳಿಯದಳ್ ಬಾನ್–ಬಾಳ ಪೆರ್ಮೆಗಳ ತಾಯಿ,
ತಲೆಯಲ್ಲಿ ಪೊನ್ನಮುಡಿ, ಪದಿದರಿಲ ಪೆಂಪು, ಬೆಳ್ದಾವರೆಯ ಪೊಂಗಯ್ !
ಸುತ್ತಲುಂ ಪೊನ್ನಾಡ ಕನ್ನಡದ ಪೆರ್ಮನಡಿಗಳ್, ಸಾವನೊದೆದು ಬೆಳಗಿ,
ಕನ್ನಡದ ಮಕ್ಕಳ್ಗೆ ಕನ್ನಡದ ಪಾಲೆರೆದು, ಬಾಳ್ಗೆ ಬಾಳ್ ಪೊಯ್ದು,
ಬಾಳ್ವವರು ಮೆರೆವವರು, ಪೆರ್–ನೋಟ ! ಪಿರಿಯ ತಾಯ್, ಪಿರಿಯ ಮಕ್ಕಳ್ !
ಕಪ್ಪು ಹೆಪ್ಪಿನ ಕುರುಳ ಕಮ್ಮುಗಿಲ ಬಸಿರಿಂದ ತೊಟ್ಟನೊಡೆಹೊಮ್ಮಿ,

ಬಾನ ಈ ಕರೆಯಿಂದ ಆ ಕರೆಗೆ ಚಿಮ್ಮಿ, ಒಡನಡುಗುವುದೆ ತೇಜಂ,
ಆ ತೇಜದುರಿಯಂತೆ ಕಣ್ಣುಳ್ಳಿ, ಹೊರಗಡಗಿ, ಒಳಗಿರ್ಪುದಿನ್ನುಂ.
ಇದೊ ಬಂದೆನೀ ಹಾಳು ಹಂಪೆಗಿಂದರಸುತ್ತ,–ಒಳಗಿರ್ಪುದಿನ್ನುಂ–
ಒಳಗಿದ್ದು ಹೊರಗಣ್ಗೆ ಕಾಣಿಪುದು ಮತ್ತೊಮ್ಮೆ ಆ ತಾಯ ನೋಟಂ.
ತುಂಗಭದ್ರೆಯ ತಡಿಯ ಚೆದರಿರುವ ನೊರಡಿಗಳ ಕೊರಕಲಿನ ಬಿಸಿಲ
ಬೇಗುದಿಯ ಬಿರುಕಿನಲಿ ಮುಳ್ಳೆಡೆಯ ಕಲ್ಲುಹೂವಿಡಿದರೆಯ ಮೇಲೆ,
ಕುಳಿತಿದ್ದಳಾ ತಾಯಿ, ಕೈಮೇಲೆ ತಲೆಯೂರಿ, ಅಳಲಿನಾಳದಲಿ !–
“ ಯಾರವ್ವ, ನೀ ತಾಯಿ ? ಏತಕಿಂತೊಬ್ಬಳೇ ಕುಳಿತೆ ಕಾಡಿನಲಿ ?
ಏಕೆ ಮೊಗ ಬಾಡಿಹುದು, ಕಂದಿಹುದು, ನೊಂದಿಹುದು, ಕಾಂತಿಗುಂದಿಹುದು ?
ಕಂಬನಿಗಳೂರುತಿಹ, ಕಳವಳದ, ಕೂರ್ಮೆ ನಡುಗಿಪ ನುಡಿಯ ಕೇಳಿ,
ಕತ್ತೆತ್ತಿ ಪಳಮೆಯಾಳದ ಕಣ್ಣನೆನ್ನ ಕಣ್ಣಲ್ಲಿ ನೆಟ್ಟು, ಕಯ್ಯ
ಕುಳ್ಳಿರಲು ಸನ್ನೆಗೈದೀ ಪರಿಯೊಳಾಡಿದಳು, ತೋಡಿದಳು ತೊಳಲ–
ಕಣ್ಣಾರ ಕಂಡುದನು, ತಾಯೆನ್ನೊಳಾಡಿದುದನಾಡುವೆನು, ಕೇಳಿ.
ಕಿವಿಗೊಟ್ಟು ಕೇಳಿ :
ಎದೆಗೊಟ್ಟು ಕೇಳಿ :
ಏಳಿ, ಎಚ್ಚರವಾಗಿ, ಅರಳಿ ಬಾಳಿ !

೪

“ ಕೇಳಣ್ಣ, ನಾನೊಬ್ಬ ಹಳೆಯ ಮುತ್ತೈದೆ–ಹಿರಿದಾಗಿ ಬಾಳಿದವಳೊಮ್ಮೆ :
ಈಗ ಬಡತನ, ಬಡವೆ, ಬಡವಾದೆ ; ಬಡವಾದ ಮಕ್ಕಳನು ನೋಡಿ,
ಬತ್ತಿ, ಮತ್ತಿಮ್ಮಡಿಯ ಸೊರಗಿನಲಿ ಬಡವಾದೆ–ಸಾವಿಲ್ಲ ನನಗೆ !
ಸಾವಿಲ್ಲ–ಸಾಯುತಿಹೆ : ಹೊಸ ಮಳೆಗಳಾಗಿ, ನೆಲ ಹೊಸ ಹೊನಲು ಹರಿದು,
ಹೊಸ ಹಮ್ಮು ಹಮ್ಮುತ್ತೆ, ಎಲ್ಲರೂ ನನ್ನಕ್ಕತಂಗಿಯರು–ಚಿಗುರಿ
ಎಲ್ಲರೂ ಚೆಲುವಾದರೆಲ್ಲರೂ ಚಿನ್ನವಾದರು–ನೋಡು, ನೋಡು–
ಆ ಕಡೆಗೆ, ಈ ಕಡೆಗೆ, ತೂಗುವರು ತೊನೆಯುವರು, ಆ ಪೊಂಕ, ಬಿಂಕ !
ಪೇರೊಕ್ಕಲಾಗಿ ಪಾಡುವರು ;
ಅವರ ಮಕ್ಕಳು ಬೆಳೆದು ಕಳೆಗೂಡಿ ಮನೆ ಬೆಳಗಿ ಹಬ್ಬಮಾಡುವರು–
ತಾವ್ ಮೊದಲು ಬದುಕಿ,
ತಾಯ್ ಮೊದಲು ಬದುಕಿ,
ಹೆರರ ಹೊರೆಗಳನಿಳಿಸೆ, ಹೆರರ ಸೆರೆಗಳ ಬಿಡಿಸೆ, ಕಯ್ಯ ನೀಡುವರು.
ಆ ಸಯ್ಪು, ಆ ಪುಣ್ಯ ನನಗಿಲ್ಲ : ನನ್ನ ಮಕ್ಕಳಿಗಿಲ್ಲ ಹಬ್ಬ–
ನನ್ನ ಮಕ್ಕಳಿಗಿಲ್ಲ ಹಬ್ಬ :

ಮಳೆ, ಸುಗ್ಗಿ, ಬೆಳೆ, ಬೆಳಕು; ಹಾಡು, ಹಸೆ; ಕೂಗಾಟ, ಕುಣಿದಾಟ, ಪಾಟ;
ಒಲಿದಾಟ, ನಲಿದಾಟ, ಒಲುಮೆ ಬೀರಾಟ,
ನನ್ನ ಮಕ್ಕಳಿಗಿಲ್ಲ-ನನಗಿಲ್ಲ-ಬಾಳ್ಗೆ ಆ ಅಕ್ಕತಂಗಿಯರು!
ನಮಗಿಲ್ಲ ಬಾಳು.

ಎಲ್ಲರೂ ಬಾಳುವೆಡೆ ನಮಗೆ ಸಾವೆ?
ಎಲ್ಲರೂ ನಲಿವ ಕಡೆ ನಮಗೆ ನೋವೆ?

ಏನು ಕವಿಯಿತೊ ಮಂಕು, ಮಕ್ಕಳಿಗೆ! ಯಾರೆರಚಿದರೊ ಬೂದಿ, ಕಾಣೆ,
ನನ್ನನೊಲ್ಲರು ನನ್ನ ಮಕ್ಕಳೇ! ತಾವ್ ಬಾಳಿ, ತಾಯ ಬಾಳಿಸರು.
ಹೆರರ ನುಡಿ, ಹೆರರ ನಡೆ,-ಹೆರರ ಕೂಗೇ ಕೂಗು; ಹೆರರದೇ ಹೆಮ್ಮೆ!

ನನ್ನ ಮನೆ ಹಾಳು!
ನನ್ನ ನುಡಿ ಬೀಳು!

ನನ್ನ ನಾಡಿನಲಿರುಳು: ನನ್ನ ತೋಟವನಗೆವ, ತೆಂಗಡಿಕೆಯಿಡುವ,
ತಾವರೆಯ ಕಾಪಿಡುವ, ಮೊಲ್ಲೆ ಮಲ್ಲಿಗೆ ನೆಡುವ, ಆನಂದ ಕೊಡುವ
ಮಕ್ಕಳೆಲ್ಲಿಹರೆನಗೆ-ಹೆರರೊತ್ತೆ ಗಡಿಬಿಡುತ ಹದುಗುತ್ತ, ನುಗ್ಗೆ ಕುಗ್ಗುತ್ತ,
ಹೆರರ ಕೈ ಕಾಯುತ್ತ, ಸಾಯದೆಯೆ ಬದುಕದೆಯೆ ಬಾಳ ನೂಕುವೆನು."

೫

ಅರಿದೆನರಿದೆನು ಮಾತನಾಡುವಳದಾರೆಂದು: ಕನ್ನಡದ ತಾಯಿ!
ನಮ್ಮ ಕನ್ನಡ ತಾಯಿ, ತನ್ನ ಹೊಂಬಸಿರಿಂದ ನಮ್ಮನ್ನು ತಂದು.
ನಾವು ಬಿಟ್ಟೊಡೆ ಬಿಡದೆ, ಹಂಬಲಿಸಿ, ಮರುಹುಟ್ಟ ಹಾರೈಸುತಿಹಳು-
ನಾನೆಂದೆ, ಅಳಲನಾರಿಸಬಯಸಿ-"ಏಕಮ್ಮ ಇನಿಸೊಂದು ಕೊರಗು?
ಬೇಡಮ್ಮ ಮಕ್ಕಳಲಿ ಇನಿಸೊಂದು ಕಡುಮುನಿಸು-ಬಾರಮ್ಮ, ಹರಸು.
ನಿನ್ನ ನಾಡಿನೊಳದಕೊ ಬೆಳಕು ಮೂಡಿಹುದು-ಜೀವ ಕೂಡಿಹುದು.
ನಿನ್ನ ಮಕ್ಕಳು ನಿದ್ದೆಗಳೆದೆದ್ದು ಸಿಂಹದಂತೇಳುತ್ತ, ಮೊಳಗಿ,
ಕಣಕಿಳಿದು ಪಂಪ ನೃಪತುಂಗರಾ ಮಾತುಗಳು ದಿಟವೆನಿಸುತಿಹರು.
ಸೆರೆಯನೊಕ್ಕಡೆಗೊಗೆದು, ಬಿಡುಗಡೆಯ ಕೈಕೊಂಡು, ಹಳ ನೆನಪು ನೆನೆದು,
ಹೊಸ ಕಾಣ್ಕೆಗಳ ಕಂಡು, ಸಾಮ್ರಾಜ್ಯಗಳ ಮತ್ತೆ ಕಟ್ಟುತಿಹರು.
ನಿನ್ನ ನಾಡೊಂದಾಗಿ, ನಿನ್ನ ನುಡಿ ಮೇಲಾಗಿ, ಮನೆ ಮಕ್ಕಳೆಲ್ಲ
ಪೇರೊಕ್ಕಲಾಗಿ ಪಾಡುವರು!
ತಾಯ್ ಬದುಕಿ, ತಾವ್ ಬದುಕಿ, ಹೆರರ ಬದುಕಿಪರು!

ಹಾಳು ಹಂಪೆಯ ನಡುವೆ, ನಡುಕಟ್ಟಿ ಮತ್ತೊಮ್ಮೆ ಮುಡಿಪಾಗಿ ತಾಯ್ಗೆ

ಭಕ್ತಿಯಲಿ ಜೀವವನು ಸಲಿಸುವರು–ಏಳು!
ಸಡಗರದ ಆ ಕೂಗ ಕೇಳು:
ನಾಡು ಸಿಂಗರವಾಯ್ತು, ಬೀಡು ಹೆಬ್ಬೆಳಕಾಯ್ತು, ಅದೊ ಹಬ್ಬ ಮೆರೆತ!
ಹೆಣ್ಣ ಚೆಲುವನು ನೋಡು–ಗಂಡುಗಲಿಗಳ ನೋಡು–ಕಟ್ಟಾಳುಗಳನು.
ರಾಜರನು, ಋಷಿಗಳನು, ಕವಿಗಳನು, ಧೀರರನು–ಕರ್ಮವೀರರನು.
ಹೊಸತ ಹಳದನು ಮಾಡಿ, ಹಳದ ಹೊಸತನು ಮಾಡಿ, ನಾಡೊಂದು ಮೂಡಿ,
ಧರ್ಮ ಸತ್ಯಗಳಿಂದ, ಪ್ರೇಮ ಶಾಂತಿಗಳಿಂದ, ಸ್ವಾತಂತ್ರ್ಯದಿಂದ,
ಸುಖದಿಂದ, ಸೌಂದರ್ಯದಾನಂದದಿಂದೆಲ್ಲ ಸಮದೃಷ್ಟಿಯಿಂದ
ಬಾಳರೇ ನೀ ಬಂದು ನಲಿಸಿದೊಡೆ, ಹರಸಿದೊಡೆ–ಬಾ ತಾಯಿ ಹರಸು.
ತೇರೇರು ಬಾ ತಾಯಿ, ನಿನ್ನ ಸಿಂಹಾಸನವನೇರು ಮತ್ತೊಮ್ಮೆ
ಪಳಮೆಯಲಿ ಪೇರಾಲವನು ನೀನು ಬಿತ್ತಲದು ಮೊಳೆತು, ಮರವಾಗಿ,
ಪಡುವ ಮೂಡಲು ತೆಂಕ ಬಡಗಲೆಡೆ ಕೊಂಬೆಗಳೆನೆಸೆದೆಸೆದು ಬೀಗಿ,
ಈ ಕೊಂಬೆ ಕರಗಿದೊಡೆ ಆ ಕೊಂಬೆ ಬಿಳಿಲಿಳಿದು ಬೇರೂರಿ ತಾಗಿ
ಒಂದೇ ಮರವಮರವಾಗಿರ್ಪಂತೆ, ಅಮರವಾಗಿನ್ನುಮದೆ ಇಹುದು
ನಿನ್ನೊಂದು ಕರ್ನಾಟರತ್ನಸಿಂಹಾಸನಂ–ಬಾಳ್ಗೆ, ಅದು ಬೆಳಗೆ
ಕನ್ನಡದ ಮುಡಿಯಾಗಿ, ಕನ್ನಡದ ನುಡಿಯಾಗಿ, ಕನ್ನಡದ ಬಾಳ ಕುಡಿಯಾಗಿ!
–ಬಾರಮ್ಮ, ಹರಸು."

೭

ನಕ್ಕಳಾ ತಾಯಿ.
ಮುದುಕಿ ಎಳೆಯುವಳಾಗಿ, ಮಾಸು ಮಿಂಚೆಳೆಯಾಗಿ, ಸವೆದ ಮೈ ತುಂಬಿ,
ಕಡಲ ತೆರೆಗಳನುಟ್ಟು, ಬೆಟ್ಟಬಯಲನು ತೊಟ್ಟು, ಆರಿಲ ಮುಡಿಗಿಟ್ಟು.
ಮುಗುಳ್–ನಗೆಯ ನಸುನಕ್ಕಳಾ ತಾಯಿ, ನನ್ನ ತಲೆಯಲಿ ಕಯ್ಯ ತಾವರೆಯ
ನಿಟ್ಟು;
ಸುತ್ತಲುಂ ಕಾಣಿಸಿದರೊಡನೆ–
ಕನ್ನಡದ ಪೊನ್ನಾಡ ಪೆರ್ಮನಡಿಗಳ್!
ಸಾವನೊದೆವಾ ಪಾಲ ಸೂಸು ಕಿಡಿಗಳ್!
ಹಿಂದೆ ನೀಡಿದ ಸಾಲು, ಮುಂದೆ ನೀಡಿದ ಸಾಲು, ಕನ್ನಡದ ಕರುಳುಗಳು
–ನಡುವೆ, ಸಿರಿ ತಾಯ್
ಭುವನೇಶ್ವರೀದೇವಿ ರಥವನೇರಿದಳು.
ಕೂಗಿದರು ಎಲ್ಲರೂ ಒಕ್ಕೊರಲ್!–
"ತಾಯ್ ಬಿಜಯಮಾಡುವಳು, ದಾರಿ ಬಿಡಿ, ದಾರಿ ಬಿಡಿ, ಅಡ್ಡಬಾರದಿರಿ.

ಭಾರತಾಂಬೆಯ ಹಿರಿಯ ಹೆಣ್ಮಗಳೆ, ದಾರಿ ತೋರುವ ಹಿರಿಯ ಸೋದರಿ
ಬಾಳಮ್ಮ, ಬಾಳು!
ನೀನ್ ಬಾಳೆ, ಏನ್ ಬಾಳು ನಿನ್ನ ಮಕ್ಕಳದು!–ಬಾನ್‌ಬಾಳು, ತಾಯೆ–
ಬಾಳಮ್ಮ, ಬಾಳು!"

೭

ಚೆಲುವೆಯರ, ಚೆನ್ನಿಗರ, ಹಿರಿಯ ತಾಯ್ ಮಕ್ಕಳಿರ, ಒಡಹುಟ್ಟಿದವರಾ,
ಒಸಗೆನುಡಿ ಕೇಳಿದಿರ, ತಾಳಿದಿರ ಎದೆಯಲ್ಲಿ, ತಾಳಿ ಬಾಳುವಿರಾ,
ನಾಡು ನುಡಿ ನಡೆಗಳನು ಮುನ್ನಡಗೆ ನಡಸುತ್ತ, ಮುಂದೆ ಸಾಗುವಿರಾ?
ಭಾರತದ, ಲೋಕದಾ ಮಕ್ಕಳಲಿ ಹಿರಿದಾಗಿ ತೂಕ ತೂಗುವಿರಾ?
ಬನ್ನಿ, ಓ ಮಕ್ಕಳಿರ,
ಒಕ್ಕೊರಲಲೆಲ್ಲರೂ ಕೂಗಿ ಈ ಒಕ್ಕೂಗ–ಈ ಹಿರಿಯ ಕೂಗ–
"ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ, ಸಿರಿಗನ್ನಡಂ ಗೆಲ್ಗೆ, ಬಾಳ್ಗೆ-
ಕನ್ನಡದ ತಾಯ್ ಗೆಲ್ಗೆ, ಬಾಳ್ಗೆ."

ಶ್ರೀ

## ೪೮. ಕನ್ನಡಾಂಬೆಯ ಹಿರಿಮೆ

ರಾಗ: ಮೋಹನ ಕಲ್ಯಾಣಿ-ಝಂಪೆ ತಾಳ

೧

ಕನ್ನಡವನುಳಿದೆನಗೆ | ಅನ್ಯಜೀವನವಿಲ್ಲ
ಕನ್ನಡವೆ ಎನ್ನುಸಿರು | ಪೆತ್ತೆನ್ನ ತಾಯಿ
ಕನ್ನಡವೆ ಧನಧಾನ್ಯ | ಕನ್ನಡವೆ ಮನೆಮಾನ್ಯ
ಕನ್ನಡವೆ ಯೆನಗಾಯ್ತು | ಕಣ್ಣು ಕಿವಿ ಬಾಯಿ

೨

ಕನ್ನಡದ ಸವಿಮಾತು | ಮನ್ನಣೆಯ ಪಳಮಾತು
ಕನ್ನಡ ಸರಸ್ವತಿಯು | ನವ ಕಲ್ಪಲತೆಯು
ಕನ್ನಡದ ವರ ಚರಿತೆ | ವಿಮಲ ಗಂಗಾಸರಿತೆ
ಕನ್ನಡದ ಸಿರಿಪೆಂಪು | ಎನಗೆ ನರುಗಂಪು

೩

ಕನ್ನಡ ಸನ್ಮಾನ | ವೆನಗದುವೆ ವರಮಾನ
ಕನ್ನಡಿಗರ ಸ್ವತಂತ್ರ | ವದೆ ಪರಮಮಂತ್ರ
ಕನ್ನಡದ ಕೀರ್ತಿ | ಯೆನ್ನ ಚಿತ್ತದ ಸ್ಫೂರ್ತಿ
ಕನ್ನಡದ ಒಗ್ಗೂಟ | ವೆನಗದ ಕಿರೀಟ

೪

ಕನ್ನಡದ ಹೊಲ ಮಣ್ಣು | ಎನಗೆ ನವನಿಧಿ ಹೊನ್ನು
ಕನ್ನಡದ ತಿಳಿಜಲವು | ಸುಧೆಯು ಪಲ್ವಲವು
ಕನ್ನಡದ ಹೂಗಿಡವು | ಎನ್ನೊಡಲಿಗದೆ ತೊಡವು
ಕನ್ನಡದ ಪಶುಪಕ್ಷಿ | ಚೆಲುವಿಗದೆ ಸಾಕ್ಷಿ

೫

ಕನ್ನಡಿಗರತಿಶಯವು | ಭುವನೇಶ್ವರಿಯ ದಯವು
ಕನ್ನಡಿಗರಿಗೆ ಜಯವು | ಕೃಷ್ಣನಾಶ್ರಯವು
ಕನ್ನಡದ ಜನ ಕುಲವು | ಎನ್ನ ತೋಳಿಗೆ ಬಲವು
ಕನ್ನಡಾಂಬೆಯ ಮುಕ್ತಿ ರಾಮನುತಿ–ಶಕ್ತಿ

ಬೆನಗಲ್ ರಾಮರಾವ್

# ಕವಿಗಳ ಅಕಾರಾದಿ

---

## ಕಾವ್ಯಗಳ ಅಕಾರಾದಿ

# ಹೊಸ ಕವಿತೆಗಳ ಅಕಾರಾದಿ